# ಚಿನ್ನಹಗರಿ ನದಿ ಪರಿಸರ : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)

ಸಂಶೋಧಕರು
ಜಿ.ಎಂ.ಲೋಕೇಶ

ಮಾರ್ಗದರ್ಶಕರು
ಡಾ. ವಿರೂಪಾಕ್ಷಿ ಪೂಜಾರಹಳ್ಳಿ
ಪ್ರವಾಚಕರು
ಚರಿತ್ರೆ ವಿಭಾಗ



ಸಮಾಜವಿಜ್ಞಾನಗಳ ನಿಕಾಯ
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬
೨೦೦೮

# ಚಿನ್ನಹಗರಿ ನದಿ ಪರಿಸರ : ಚಾರಿತ್ರಿಕ ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯ, ಹಂಪಿ, ಚರಿತ್ರೆ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಸಲ್ಲಿಸಿದ ನಿಬಂಧ)


ಸಂಶೋಧಕರು

ಜೆ.ಎಂ.ಲೋಕೇಶ





ಮಾರ್ಗದರ್ಶಕರು

ಡಾ. ವಿರೂಪಾಕ್ಷಿ ಪೂಜಾರಹಳ್ಳಿ

ಪ್ರವಾಚಕರು

ಚರಿತ್ರೆ ವಿಭಾಗ







ಸಮಾಜವಿಜ್ಞಾನಗಳ ನಿಕಾಯ

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ - ೫೮೩ ೨೭೬

೨೦೦೮

# ದೃಢೀಕರಣ ಪತ್ರ

**ಚಿನ್ನಹಗರಿ ನದಿ ಪರಿಸರ : ಚಾರಿತ್ರಿಕ ಅಧ್ಯಯನ** ಎಂಬ ನಿಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಎಂ.ಫಿಲ್.ಪದವಿಗಾಗಿ ಜಿ.ಎಂ.ಲೋಕೇಶ ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಬೇರೆ ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**ಸ್ಥಳ:** ವಿದ್ಯಾರಣ್ಯ

**ದಿನಾಂಕ:**

**ಡಾ. ವಿರೂಪಾಕ್ಷಿ ಪೂಜಾರಹಳ್ಳಿ**
**ಮಾರ್ಗದರ್ಶಕರು ಮತ್ತು ಪ್ರವಾಚಕರು**
ಚರಿತ್ರೆ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩ ೨೭೬

# ಪ್ರಮಾಣ ಪತ್ರ

**ಚಿನ್ನಹಗರಿ ನದಿ ಪರಿಸರ : ಚಾರಿತ್ರಿಕ ಅಧ್ಯಯನ** ಎಂಬ ನಿಬಂಧವನ್ನು **ಡಾ. ವಿರೂಪಾಕ್ಷಿ ಪೂಜಾರಹಳ್ಳಿ** ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಎಂ.ಫಿಲ್. ಪದವಿಗಾಗಿ ಸಮಾಜವಿಜ್ಞಾನಗಳ ನಿಕಾಯದ ಚರಿತ್ರೆ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಪ್ರಸ್ತುತ ನಿಬಂಧವು ಮೂಲವಾಗಿದ್ದು, ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

**ಸ್ಥಳ: ವಿದ್ಯಾರಣ್ಯ**

**ದಿನಾಂಕ:** ೧೦-೧೦-೦೮

G.M. Lokesha


**ಜಿ.ಎಂ.ಲೋಕೇಶ**

**ಸಂಶೋಧಕರು**

ಚರಿತ್ರೆ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

# ಪರಿವಿಡಿ

# ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

## ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಮತ್ತು ಸ್ವರೂಪ

ಪ್ರಾಚೀನ ಕಾಲದಲ್ಲಿ ಅಲೆಮಾರಿಯಾಗಿದ್ದ ಮಾನವ ಒಂದಡೆ ನೆಲೆ ನಿಲ್ಲಲು ಸಹಸ್ರಾರು ವರ್ಷಗಳೇ ಬೇಕಾದವು. ಗವಿ, ಪೂಟರೆ, ಕಲ್ಲಾಸರೆಗಳನ್ನು ಜೀವನ ಸಾಗಿಸುತ್ತಿದ್ದ ಮಾನವ ಗಡ್ಡೆ ಗೆಣಸು ಹಾಗೂ ಹಣ್ಣು ಹಂಪಲುಗಳನ್ನು ತಿನ್ನುತ್ತಿದ್ದ ನಂತರ ಇವನು ಬೇಟೆಯಾಡುವುದನ್ನು ಕಲಿತುಕೊಂಡ. ಪ್ಲೇಟೋ ಹೇಳುವಂತೆ " ಮುಂದೆ ಪಶುಸಂಗೋಪನೆಯಲ್ಲದೆ,ಕೃಷಿಯನ್ನು ರೂಢಿಸಿಕೊಂಡು ಒಂದು ಸಮಾಜ ಹಾಗೂ ರಾಜ್ಯ ವ್ಯವಸ್ಥೆಯತ್ತ ಹೆಜ್ಜೆ ಹಾಕಿದನು". ಹೀಗೆ ಹಂತ ಹಂತವಾಗಿ ಪ್ರಗತಿಯಡೆ ಸಾಗಿ ಬಂದ ಮಾನವನ ಚರಿತ್ರೆಯನ್ನು ಸಮಗ್ರ ಮತ್ತು ಸೂಕ್ಷ್ಮ ಅಧ್ಯಯನ ನಡೆಸುವುದು ಅವಶ್ಯಕವಾಗಿದೆ. ಒಂದು ದೇಶದ ಇತಿಹಾಸ ಒಬ್ಬ ವ್ಯಕ್ತಿಯು ಸಮಗ್ರವಾಗಿ ಅಧ್ಯಯನ ಮಾಡುವುದು ಕಷ್ಟಸಾಧ್ಯ. ಈ ಹಿಂದೆ ರಾಜರ ವೈಭವಿತ ಚರಿತ್ರೆಯನ್ನು ರಚಿಸುವ ಕಾಲ ಇತ್ತು. ಆದರೆ ಆಧುನಿಕ ಚರಿತ್ರೆ ಲೇಖನ ಕಲೆಯು ಸಂಪೂರ್ಣ ಬದಲಾಗಿದೆ. ಇಂದು ಚರಿತ್ರೆಯನ್ನು ವಿವಿಧ ಆಯಾಮಗಳಿಂದ ವಿಶ್ಲೇಷಣೆ ಮಾಡಲಾಗುತ್ತಿದೆ.ಅಂದರೆ ಮೌಖಿಕ ಚರಿತ್ರೆ ಕೆಳಸ್ತರದವರ ಚರಿತ್ರೆ, ಸ್ಥಳೀಯ ಚರಿತ್ರೆ ಬಗೆಗೆ ಸಮಗ್ರ ಮತ್ತು ಸೂಕ್ಷ್ಮ ಅಧ್ಯಯನಗಳು ನಡೆಯುತ್ತಿದೆ. ಅದರಲ್ಲೂ ಸ್ಥಳೀಯ ಮಟ್ಟದಲ್ಲಿ ಇಂಥ ಸಮಗ್ರ ಮತ್ತು ಸೂಕ್ಷ್ಮ ಅಧ್ಯಯನಗಳನ್ನು ನಡೆಸುವುದರ ಮೂಲಕ ಆ ಪ್ರದೇಶದ ಮಾನವನ ಜೀವನ ಕ್ರಮವನ್ನು ಅರಿಯಲು ಸಾಧ್ಯವಾಗುತ್ತದೆ.

ಯಾವುದೇ ಒಂದು ಸಂಸ್ಕೃತಿ ಬೆಳೆಯಬೇಕಾದರೆ ನದಿ ಪರಿಸರ ಮುಖ್ಯ ಪಾತ್ರವಹಿಸುತ್ತದೆ. ಈಜಿಪ್ಟ್, ಮೆಸಪಟೋಮಿಯಾ, ಸಿಂಧೂಬಯಲಿನ ನಾಗರಿಕತೆಯನ್ನು ನಾವು ಇಲ್ಲಿ ಉದಾಹರಿಸಬಹುದು, ಸಾಮಾನ್ಯವಾಗಿ ಅಲ್ಲಿರುವ ವಾತಾವರಣ, ನೀರು, ಕಾಡು ಬೆಟ್ಟಗುಡ್ಡಗಳು ಇಂಥವುಗಳು ಒಂದು ಸಂಸ್ಕೃತಿ ನೆಲೆನಿಲ್ಲಲು ಸಹಾಯಕವಾಗುತ್ತವೆ.

ಕರ್ನಾಟಕ ರಾಜ್ಯದ ನೆಲ ಜಲ ಪ್ರಾಕೃತಿಕ ಸಂಪತ್ತು ಅದ್ಭುತವಾದದು. ಜಲದಲ್ಲಿಯೂ ರಾಜ್ಯದ ಸಾಧನೆ ದೊಡ್ಡದು. ಸುಮಾರು ೬೦ ಕ್ಕೂ ಹೆಚ್ಚು ನದಿಗಳು ಈ ನಾಡಿನಲ್ಲಿ ಹರಿಯುತ್ತವೆ. ಅವುಗಳಲ್ಲಿ ಅತೀ ಪ್ರಮುಖವಾದ ನದಿಗಳೆಂದರೆ ಶರಾವತಿ , ತುಂಗಭದ್ರ, ಕೃಷ್ಣ, ಮಲಪ್ರಭಾ, ಘಟಪ್ರಭಾ, ಕಾವೇರಿ, ಸುವರ್ಣಮುಖಿ, ಚಿನ್ನಹಗರಿ ಇನ್ನು ಮುಂತಾದವುಗಳು ಇಂಥ ನದಿ ಬಯಲಿನಲ್ಲಿ ಅನೇಕ ಅರಸು ಮನೆತನಗಳು ಬೆಳೆದು ತಮ್ಮದೇ ಆದ ಸಾಂಸ್ಕೃತಿಕ ಇತಿಹಾಸ ನಿರ್ಮಿಸಿವೆ. ಈ ನದಿಗಳಲ್ಲಿ ಚಿನ್ನಹಗರಿ ನದಿಯೂ ಒಂದು. ಇದು ಚಿತ್ರದುರ್ಗ ಜಿಲ್ಲೆಯ ಪಶ್ಚಿಮ ಬೆಟ್ಟದ ಓಬಳದೇವರಗುಡ್ಡದಲ್ಲಿ ಹುಟ್ಟಿ ಉಪ್ಪನಾಯಕನಹಳ್ಳಿ, ನಂದಿಪುರ, ಸೊಂಡೆಕೊಳ

ಗೊಡಬನಹಾಳ್, ದೇವರಪುರದಹಟ್ಟಿ, ಹುಲ್ಲೂರು, ಸಿಂಗಾಪುರ ಹಿರೆಗುಂಟನೂರು ಕ್ಯಾಸಾಪುರದ ಮೂಲಕ ಕಾತ್ರಾಳುಕೆರೆ ಸೇರುತ್ತದೆ. ನಂತರ ವಡ್ಡನಹಳ್ಳಿ ಚಿಪ್ಪಿನಕೆರೆ,ಚಿಕ್ಕಗೊಂಡನಹಳ್ಳಿಯಿಂದ ಸಂಗೇನಹಳ್ಳಿ ಕೆರೆ ಸೇರುತ್ತದೆ. ಅಲ್ಲಿಂದ ಮುಂದೆ ದೊಣೆಹಳ್ಳಿ ಮಲ್ಲಾಪುರದ ಮೂಲಕ ಹರಿದು ಕಲ್ಲಹಳ್ಳಿ ಹತ್ತಿರ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ತಿಪ್ಪೇಹಳ್ಳಿ ಹೂಡೇಂ, ಕುಮತಿ ಚಿಕ್ಕೋಬನಹಳ್ಳಿ, ಕಂಪಳದೇವರಹಟ್ಟಿ, ವಲಸೆ, ಮೀನಕೆರೆ, ಕೊಂಬೆಹಳ್ಳಿ, ಗಡ್ಡದಬೋರಯ್ಯನಹಟ್ಟಿ ನುಂಕನಹಳ್ಳಿ, ಮಾರಮ್ಮನಹಳ್ಳಿ ಮೂಲಕ ಹರಿದು ರಂಗಯ್ಯನದುರ್ಗ ಜಲಾಶಯ ಸೇರುತ್ತದೆ. ನದಿಗೆ ಬಳ್ಳಾರಿ ಜಿಲ್ಲೆ ಕೂಡ್ಲಿಗಿ ತಾಲ್ಲೂಕಿನ ಹುರಡಿಹಳ್ಳಿ ಬಳಿ ಅಣೆಕಟ್ಟನ್ನು ಕಟ್ಟಲಾಗಿದೆ. ಅನಂತರ ಬಂಗಳಕೊಲ್ಲಿಯಲ್ಲಿ ಲೀನವಾಗುತ್ತದೆ.

ಚಿನ್ನಹಗರಿ ಅತಿ ಪುರಾತನ ಕಾಲದಿಂದಲೂ ಧಾರ್ಮಿಕ ಸಾಂಸ್ಕೃತಿಕ ಹಾಗೂ ಚಾರಿತ್ರಿಕವಾಗಿ ಮಹತ್ವ ಪಡೆದ ನದಿಯಾಗಿದೆ. ಮಳೆಗಾಲದಲ್ಲಿ ಮಾತ್ರ ಹರಿಯುವುದರಿಂದ ಇದನ್ನು ಬಡನದಿ, ಪಾಪವಿನಾಶಿನಿ ಎಂದು ಕರೆಯುತ್ತಾರೆ. ಕನ್ನಡದ ಶ್ರೇಷ್ಠ ವಚನಕಾರ ಮಗ್ಗೆಯ ಮಾಯಿದೇವನು ಮೂರು ನದಿಗಳ ಮಧ್ಯೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತೆಂದು ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ. ಅವುಗಳೆಂದರೆ ತುಂಗಭದ್ರ, ಚಿನ್ನಹಗರಿ ಮತ್ತು ವೇದಾವತಿ. ಆದರೆ ಭೂಗರ್ಭಶಾಸ್ತ್ರಜ್ಞರ ಪ್ರಕಾರ ಇಲ್ಲಿ ಚಿನ್ನದ ನಿಕ್ಷೇಪಗಳು ಇದ್ದವು ಎಂದು ಅದಕ್ಕಾಗಿ ಚಿನ್ನಹಗರಿ ಎಂದು ಕರೆದಿರಬಹುದು ಎಂದಿದ್ದಾರೆ. ಒಟ್ಟಿನಲ್ಲಿ ಈ ನದಿ ಪರಿಸರದಲ್ಲಿ ಅನೇಕ ಧಾರ್ಮಿಕ ತಾಣಗಳು, ಐತಿಹಾಸಿಕ ನೆಲೆಗಳು ಹಾಗೂ ಸಾಂಸ್ಕೃತಿಕ ವೀರರಿದ್ದ ಕುರುಹು ಸ್ಮಾರಕಗಳನ್ನು ಕಾಣಬಹುದಾಗಿದೆ.

### ಅಧ್ಯಯನದ ಉದ್ದೇಶ

ಪ್ರಾದೇಶಿಕ, ಸ್ಥಳೀಯ ಚರಿತ್ರೆ ಹಿನ್ನೆಲೆಯಲ್ಲಿ ನಡೆದಿರುವ ಅಧ್ಯಯನಗಳನ್ನು ಗಮನಿಸಿದಾಗ ನದಿ ಪರಿಸರ ಕುರಿತಂತೆ ಎಂ.ಎಚ್.ಕೃಷ್ಣವರು ಬರೆದ ಚಂದ್ರವಳ್ಳಿ ಮತ್ತು ಬ್ರಹ್ಮಗಿರಿ ಉತ್ಖನನ ವರದಿಗಳು ಬಹಳ ಉಪಯುಕ್ತವಾಗಿವೆ. ಭೂಶೋಧನೆ ನಡೆಸುವುದರ ಮೂಲಕ ವ್ಯಾಪಕ ಅಧ್ಯಯನ ಕೈಗೊಂಡು ಶಾತವಾಹನ ಮತ್ತು ಕದಂಬ ರಾಜವಂಶಗಳು ಚಿತ್ರದುರ್ಗದಲ್ಲಿ ಆಳ್ವಿಕೆ ನಡೆಸಿದ ಕಾಲದವರಿಗಿನ ಚರಿತ್ರೆಯನ್ನು ಗುರಿತಿಸಿದ್ದಾರೆ. ೧೯೪೦ರ ದಶಕದಲ್ಲಿ ಹುಲ್ಲೂರು ಶ್ರೀನಿವಾಸ (೧೮೯೨ -೧೯೫೭) ಚಿತ್ರದುರ್ಗ ಲೇಖನ ಮತ್ತು ಪುಸ್ತಕ ರೂಪದಲ್ಲಿ ಸಂಗ್ರಹಿಸುವ ಕೆಲಸ ಮಾಡಿದ್ದಾರೆ. ಅವರ ಸಂಗ್ರಹ ಲೇಖನಗಳನ್ನು ಒಂದು ಕಡೆ ಕಲೆ ಹಾಕಿ ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು ೧೯೯೪ ಎಂದು ಗ್ರಂಥರೂಪದಲ್ಲಿ ಲಕ್ಷ್ಮಣ್ ತೆಲಗಾವಿ ಎಂ.ವಿ.ಶ್ರೀನಿವಾಸರವರು ಪ್ರಕಟಿಸಿದ್ದಾರೆ. ಈ ಕೃತಿಯಲ್ಲಿ ಹುಲ್ಲೂರು ಶ್ರೀನಿವಾಸ ಜೋಯಿಸರು

ಬರೆದಿರುವ ೪೯ ಲೇಖನಗಳಿವೆ. ಅವುಗಳಲ್ಲಿ ಮುಖ್ಯವಾದವು ೧. ಚಿತ್ರದುರ್ಗ ಮಾತನಾಡುವ ಕಲ್ಲುಗಳು ೨. ಚಂದ್ರಪುರ ಚಿತ್ರದುರ್ಗ ೩.ಚಿನ್ಮಾಲಾದ್ರಿ ಅರಮನೆ ಗುರುಮನೆ ಎಂದು ಹೇಳಬಹುದು. ೧೯೭೭ರಲ್ಲಿ ಎಂ.ವಿ.ಶ್ರೀನಿವಾಸ ಮತ್ತು ಲಕ್ಷ್ಮಣ್ ತೆಲಗಾವಿ ಅವರು ಸಂಪಾದಿಸಿರುವ ಚಂದ್ರವಳ್ಳಿ ಎನ್ನುವ ಕೃತಿಯು ಚಿತ್ರದುರ್ಗ ಚರಿತ್ರೆಯನ್ನು ಕುರಿತಂತದ್ದು. ಪ್ರಾದೇಶಿಕ ಚರಿತ್ರೆಯ ಅಧ್ಯಯನ ದೃಷ್ಟಿಯಿಂದ ಇದು ಮಹತ್ವವಾಗಿದೆ.೧೯೯೪ರಲ್ಲಿ ಪ್ರಕಟವಾದ ಎಂ. ಜಿ. ಈಶ್ವರಪ್ಪನವರ 'ಚಿತ್ರದುರ್ಗಜಿಲ್ಲೆಯ ವ್ಯವಸಾಯ ಜಾನಪದ' ಕೃತಿಯಲ್ಲಿ ವ್ಯವಸಾಯ ಪದ್ಧತಿಗಳನ್ನು ಜಾನಪದೀಯ ಆಕರಗಳಿಂದ ಅಭ್ಯಾಸ ಮಾಡಲಾಗಿದೆ. ಗೆಜೆಟಿಯರುಗಳು ಚರಿತ್ರೆಯನ್ನು ಕಟ್ಟಿಕೊಳ್ಳುವುದಕ್ಕೆ ಬಹಳ ಮುಖ್ಯವಾದ ಆಕರಗಳಾಗಿತ್ತವೆ. ಇವು ಬ್ರಿಟೀಷ್ ಆಡಳಿತಗಾರರಿಂದಲೇ ಆರಂಭವಾದವು. ೧೮೯೭ರಲ್ಲಿ ಬಿ.ಎಲ್. ರೈಸ್ ಅವರು ಮೈಸೂರ್ ಗೆಜೆಟಿಯರ್ ಸಂಪುಟ ಒಂದು, ಸಂಪುಟ ೨ ಪ್ರಕಟ ಮಾಡುತ್ತಾರೆ. ಮುಖ್ಯವಾಗಿ ಮೈಸೂರು ಪ್ರದೇಶ ಚಾರಿತ್ರಿಕ ದಾಖಲೆಯನ್ನು ಕುರಿತ ಬರವಣಿಗೆಯಾಗಿದೆ. ಹಾಗೆಯೇ ಚಿತ್ರದುರ್ಗ ಚರಿತ್ರೆಯನ್ನು ದಾಖಲಿಸಿ ಅದರ ವಿವರಣೆಯನ್ನು ನೀಡಿರುವರು.

೧೯೯೪ರಲ್ಲಿ ಸತ್ಯನ್.ಬಿ.ಎನ್. ಅವರ ಸಂಪಾದಿಸಿರುವ ಚಿತ್ರದುರ್ಗ ಗೆಜೆಟಿಯರ್‌ನಲ್ಲಿ ಚಿತ್ರದುರ್ಗವನ್ನು ಆಳ್ವಿಕೆ ಮಾಡಿದ ಪ್ರಾಚೀನ ರಾಜಮನೆತನಗಳ ಬಗ್ಗೆ ಸಮಗ್ರ ವಿವರಣೆ ಇದೆ.ಹಾಗೆಯೇ ಚಿತ್ರದುರ್ಗ ಜಿಲ್ಲೆಯ ವಿವಿಧ ಸಮುದಾಯಗಳ ಪರಿಚಯ ರಸ್ತೆ, ಸಂಪರ್ಕ, ಖನಿಜ ಸಂಪತ್ತು, ಆಡಳಿತ ವ್ಯವಸ್ಥೆ ಮುಂತಾದ ವಿಷಯಗಳನ್ನು ಸಂಗ್ರಹಿಸಲಾಗಿದೆ. ೧೯೮೪ ರಲ್ಲಿ ಸೂರ್ಯನಾಥ ಕಾಮತ್ ಸಂಪಾದಿಸಿರುವ ಕರ್ನಾಟಕ ರಾಜ್ಯ ಗೆಜೆಟಿಯರ್ ಸಂಪುಟ ೨ ಕರ್ನಾಟಕ ರಾಜಕೀಯ ಸಾಮಾಜಿಕ ಹಾಗೂ ಭೂಸುಧಾರಣೆಯನ್ನು ಕುರಿತ ಮಾಹಿತಿಯನ್ನು ನೀಡುತ್ತದೆ. ಹಾಗೆಯೇ ಸಮಗ್ರ ಕರ್ನಾಟಕದ ಇತ್ತೀಚಿನ ಬೆಳವಣಿಗೆಯನ್ನು ಅಂಕಿಅಂಶಗಳ ಸಮೇತ ದಾಖಲಿಸಿರುವ ಪ್ರಯತ್ನ ಮಾಡಿದ್ದಾರೆ. ಪ್ರೊ.ಲಕ್ಷ್ಮಣ್‌ತೆಲಗಾವಿಯವರು ಸಂಪಾದಿಸಿರುವ ಬೃಹತ್ ಗ್ರಂಥ ಹರಿತಿಸಿರಿಯು ಚಿತ್ರದುರ್ಗ ಇತಿಹಾಸವನ್ನೇ ಎಳೆ ಎಳೆಯಾಗಿ ಬಿಡಿಸಿಕೊಡುತ್ತದೆ. ಪ್ರೊ.ಲಕ್ಷ್ಮಣ್ ತೆಲಗಾವಿಯವರು ಮೌರ್ಯ ಮತ್ತು ಶಾತವಾಹನ ಯುಗದಲ್ಲಿ ಪ್ರಾಚೀನ ನೆಲೆಗಳ ಬಗ್ಗೆ ಗಮನಹರಿಸಿದ್ದಾರೆ. ಡಾ. ವಿರೂಪಾಕ್ಷಿ ಪೂಜಾರಹಳ್ಳಿಯವರು 'ಚಿನ್ನಹಗರಿಸಿರಿ', 'ವಾಲ್ಮೀಕಿ ಸಿರಿ', ಚಿತ್ರದುರ್ಗಜಿಲ್ಲೆಯಬುಡಕಟ್ಟುವೀರರು, ಅಕ್ಕಮ್ಮನ ಅಚರಣೆ, ಕಾಮಗೇತಿ ವಂಶಜರ ಚರಿತ್ರೆ ಮುಂತಾದ ಕೃತಿಗಳಲ್ಲಿ ಈ ನದಿ ಪರಿಸರದ ಬಗ್ಗೆ ಸಮಗ್ರವಾಗಿ ಪರಿಚಯ ಮಾಡಿಕೊಟ್ಟಿದ್ದಾರೆ. ಡಾ.ಎಸ್.ವೈ.ಸೋಮಶೇಖರ ರಚಿಸಿರುವ ಜಟಂಗಿರಾಮೇಶ್ವರ ದರ್ಶನದಲ್ಲಿ ಜಟಂಗಿರಾಮೇಶ್ವರ ದೇವಸಮುದ್ರದಲ್ಲಿ ಬರುವ ದೇವಾಲಯ ಸ್ಮಾರಕಗಳ ಬಗ್ಗೆ ಆಸ್ಥೆವಹಿಸಿದ್ದಾರೆ. ಟಿ.ಗಿರಿಜಾ ರಚಿಸಿರುವ ಚಿತ್ರದುರ್ಗ ಜಿಲ್ಲಾದರ್ಶಿನಿಯಲ್ಲಿ ಚಿತ್ರದುರ್ಗ ಜಿಲ್ಲೆ ಪರಿಚಯ ಮಾಡಿಕೊಡಲಾಗಿದೆ.

ಡಾ.ತಿಪ್ಪೇಸ್ವಾಮಿಯವರು ಚಿತ್ರದುರ್ಗ ರಕ್ಷಣಾ ವಾಸ್ತು ಶಿಲ್ಪ ಎಂಬ ಪ್ರಬಂಧದಲ್ಲಿ ಸೇನೆ, ಕೋಟೆ, ಬುರುಜುಗಳ ಬಗ್ಗೆ ಸಮಗ್ರ ಚಿತ್ರಣ ನೀಡಿದ್ದಾರೆ. ಜಯಣ್ಣ ಉಲ್ಲಾನಹಳ್ಳಿಯವರ ಪಿ.ಎಚ್.ಡಿ. ಪ್ರಬಂಧದಲ್ಲಿ ಮೊಳಕಾಲ್ಮೂರು ತಾಲ್ಲೂಕಿನ ಪುರಾತತ್ವೀಯ ಪರಿಸರದ ಬಗ್ಗೆ ತಿಳಿಸಿದ್ದಾರೆ. ಆದರೆ ಈ ನದಿ ಪರಿಸರದ ಬಗ್ಗೆ ಸಮಗ್ರವಾಗಿ ಅಧ್ಯಯನ ಮಾಡಲು ಈ ವಿಷಯವನ್ನು ಆಯ್ದುಕೊಳ್ಳಲಾಗಿದೆ. ಇಲ್ಲಿನ ಸಂಶೋಧನಾ ವಿಷಯ "ಚಿನ್ನಹಗರಿ ನದಿ ಪರಿಸರ: ಚಾರಿತ್ರಿಕ ಅಧ್ಯಯನ" ಪ್ರಸ್ತುತ ನಿಬಂಧದಲ್ಲಿ ಪುರಾತತ್ವ ಮತ್ತು ಧಾರ್ಮಿಕ ಕ್ಷೇತ್ರಗಳನ್ನು ಸಂಕ್ಷಿಪ್ತವಾಗಿ ಗುರುತಿಸುವ ಪ್ರಯತ್ನ ಮಾಡಲಾಗಿದೆ. ಧಾರ್ಮಿಕ ಕ್ಷೇತ್ರಗಳ ಮಹತ್ವವೇನು? ನದಿ ಪರಿಸರದ ಸಾಂಸ್ಕೃತಿಕ ಬಾಂಧವ್ಯ ಯಾವ ಬಗೆಯದು ಎಂಬುದನ್ನು ಪರೀಶೀಲಿಸುವುದು ಈ ಅಧ್ಯಯನದ ಪ್ರಮುಖ ಉದ್ದೇಶವಾಗಿದೆ. ಚಾರಿತ್ರಿಕವಾಗಿ ನಾಗರೀಕತೆಗಳ ಉಗಮ ಆಗಿರುವುದೇ ನದಿ ಬಯಲು ಪ್ರದೇಶಗಳಲ್ಲಿ ಹಾಗೆಯೇ ನದಿಯನ್ನು ಅವಲಂಬಿಸಿರುವ ಜನಸಮುದಾಯ ಈ ನದಿಯೊಂದಿಗೆ ಬೆಳೆಸಿಕೊಂಡಿರುವ ಸಂಬಂಧವನ್ನು ತಿಳಿಸುವ ಉದ್ದೇಶವಿದೆ. ನದಿಯ ಭೌಗೋಳಿಕತೆ ವಿಸ್ತಾರ ನದಿಯ ಹರಿವು ಮುಂತಾದ ಅಂಶಗಳನ್ನು ತಿಳಿಸುವ ಉದ್ದೇಶವನ್ನು ಹೊಂದಿದೆ. ಜೊತೆಗೆ ಕಲೆ ಮತ್ತು ವಾಸ್ತುಶಿಲ್ಪಕ್ಕೆ ಸಂಬಂಧಿಸಿದಂತೆ ವಿಶ್ಲೇಷಿಸಲಾಗುವುದು. ಈ ಪರಿಸರದಲ್ಲಿ ಬರುವ ಪ್ರಾಗೈತಿಹಾಸಿಕ ಧಾರ್ಮಿಕ ಕ್ಷೇತ್ರಗಳನ್ನು ನೆಲೆಗಳನ್ನು ತಿಳಿಸುವ ಉದ್ದೇಶವನ್ನು ಹೊಂದಿದೆ.

ಪ್ರಸ್ತುತ ನಿಬಂಧದಲ್ಲಿ ಬುಡಕಟ್ಟು ಸಂಸ್ಕೃತಿಯು ಕಟ್ಟಿಕೊಡುವ ಜನಪದ ಸಾಹಿತ್ಯ, ವೈದ್ಯ ಪದ್ಧತಿ, ಆಚರಣೆ ಹಾಗೂ ಸಂಪ್ರದಾಯಗಳನ್ನು ತಿಳಿಸುವ ಉದ್ದೇಶವನ್ನು ಹೊಂದಿದೆ. ಸರ್ವಧರ್ಮಗಳ ಸಮನ್ವಯತೆ ತಮ್ಮಂತೆ ಇತರರನ್ನು ಪ್ರೀತಿಸುವ ಮನಸ್ಸು ಎಲ್ಲಾ ಬಾಂಧವರು ಒಗ್ಗೂಡಿ ಏಕತೆ ಸೂಚಿಸುವ ಅಂಶಗಳನ್ನು ಹೇಳುವ ಉದ್ದೇಶವಿದೆ.

ಹಾಗೆಯೇ ಜನಸಾಮಾನ್ಯರಿಗೆ ನದಿ ಹೇಗೆ ಜೀವನಾಡಿಯಾಗಿದೆ. ಅದರ ಉಪಯೋಗವೇನು? ಅದರಿಂದ ಪಡೆದ ಲಾಭ ಒಂದು ನದಿಯಾಗಿದೆಯೇ ಅಥವಾ ಹಳ್ಳದ ರೂಪದಲ್ಲಿದೆಯೇ ಮುಂತಾದವುಗಳ ಬಗ್ಗೆ ಚರ್ಚಿಸುವ ಉದ್ದೇಶವನ್ನು ಹೊಂದಿದೆ. ಸಾಂಸ್ಕೃತಿಕವಾಗಿ ಈ ನದಿಯು ಬೀರಿರುವ ಪ್ರಭಾವ ಯಾವ ಬಗೆಯದು ಇದರಿಂದ ಇನ್ನು ಏನೇನು ಸವಲತ್ತು ಪಡೆಯಬಹುದು ಇಂಥ ಕೆಲವು ಮುಖ್ಯ ಉದ್ದೇಶಗಳನ್ನು ಇಟ್ಟುಕೊಂಡು ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ.

**ಅಧ್ಯಯನದ ವ್ಯಾಪ್ತಿ**

ಈ ಅಧ್ಯಯನವು ಚಿನ್ನಹಗರಿ ನದಿ ಅಥವಾ ಜಿನಗಿಹಳ್ಳ ಪರಿಸರವನ್ನು ಮಾತ್ರ ಕೇಂದ್ರವಾಗಿರಿಸಿಕೊಂಡಿದೆ. ಹೀಗಾಗಿ ಚಿತ್ರದುರ್ಗ, ಬಳ್ಳಾರಿ ಹಾಗೂ ದಾವಣಗೆರೆ ಜಿಲ್ಲೆಗಳ ಚಿತ್ರದುರ್ಗ,

ಹೊಳಲ್ಕೆರೆ, ಜಗಳೂರು, ಕೂಡ್ಲಿಗಿ, ಮೊಳಕಾಲ್ಮುರು ತಾಲ್ಲೂಕುಗಳಲ್ಲಿ ಬರುವ ನೆಲೆಗಳಿಗೆ ಸೀಮಿತವಾಗಿಟ್ಟುಕೊಂಡು ಅಧ್ಯಯನ ಮಾಡಲಾಗುವುದು. ಕಾಲಾನುಕ್ರಮವಾಗಿ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರಗೆ ವಿಷಯದ ವ್ಯಾಪ್ತಿಯನ್ನು ಇಟ್ಟುಕೊಳ್ಳಲಾಗಿದೆ. ಈವರೆಗೆ ಕ್ಷೇತ್ರ ಕಾರ್ಯದ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ಪರಾಮರ್ಶಿಸಿ ಚರಿತ್ರೆಯ ಶಿಸ್ತಿಗೊಳಪಡಿಸಿ ವಿಶ್ಲೇಷಿಸಲಾಗುವುದು.

ಈ ಅಧ್ಯಯನ ಧಾರ್ಮಿಕ ಕ್ಷೇತ್ರಗಳ ಮೂಲಕ ಸಮಾಜ ಮತ್ತು ಸಂಸ್ಕೃತಿಯನ್ನು ಮುಖಾಮುಖಿ ಮಾಡಲು ಪ್ರಯತ್ನಿಸಿದೆ. ಅಂತೆಯೇ ಧಾರ್ಮಿಕ ಪಂಥಗಳಾದ ಶೈವ, ವೈಷ್ಣವ, ಶಾಕ್ತೇಯ ಇವುಗಳ ಕಲೆ ಮತ್ತು ವಾಸ್ತುಶಿಲ್ಪ ಬಗ್ಗೆ ಹೇಳಲು ಪ್ರಯತ್ನಿಸಿದೆ. ಸಾಂಸ್ಕೃತಿಕ ಶೋಧದ ನೆಲೆಯಲ್ಲಿ ಇತರ ಅಧ್ಯಯನ ಮಾದರಿಗಳನ್ನು ಅನುಸರಿಸಲಾಗಿದೆ. ನದಿ ಪರಿಸರ ದಂಡೆಯ ಎಡಬಲಗಳಲ್ಲಿ ಬರುವ ನೆಲೆಗಳು ಧಾರ್ಮಿಕ ಕ್ಷೇತ್ರಗಳು ಕಲೆ ಮತ್ತು ವಾಸ್ತುಶಿಲ್ಪ ಅಲ್ಲಿ ಕಟ್ಟಿಕೊಂಡ ಜನಪದ, ಬುಡಕಟ್ಟು ಸಂಸ್ಕೃತಿ, ಸಾಂಸ್ಕೃತಿಕ ಅನನ್ಯತೆ ಬಗೆಗೆ ಪ್ರಾಮುಖ್ಯತೆ ನೀಡಲಾಗಿದೆ. ನದಿ ಪರಿಸರದ ಚರಿತ್ರೆ ಮತ್ತು ಸಂಸ್ಕೃತಿಯನ್ನು ಅಲ್ಲಿನ ಜನರು ಕಟ್ಟಿಕೊಡುವ ಬಗೆಯನ್ನು ವಿಶ್ಲೇಷಿಸಲಾಗಿದೆ.

**ಅಧ್ಯಯನದ ವಿಧಾನ**

ಪ್ರಸ್ತುತ ಅಧ್ಯಯನವು ಚರಿತ್ರೆ ಸಂಶೋಧನೆಯ ವಿಧಿ ವಿಧಾನಗಳನ್ನು ಒಳಗೊಂಡಿದೆ. ಚಿನ್ನಹಗರಿ ನದಿ ಪರಿಸರ ಕುರಿತು ನಡೆದಿರುವ ಅಧ್ಯಯನ ಸಂಶೋಧನೆಗಳನ್ನು ಅವಲೋಕಿಸಲಾಗುವುದು. ಆ ಮೂಲಕ ನಡೆಯದೇ ಇರುವ ಅಂಶಗಳ ಬಗೆಗಿನ ಅಧ್ಯಯನಗಳನ್ನು ವಿಶ್ಲೇಷಿಸುವ ಉದ್ದೇಶವಿದೆ. ಇಲ್ಲಿ ಪ್ರಾಥಮಿಕ ಮತ್ತು ಅನುಷಂಗಿಕ ಆಕರಗಳನ್ನು ಬಳಸಿಕೊಳ್ಳಲಾಗಿದೆ.ನದಿ ಪರಿಸರದ ಬಗ್ಗೆ ನಡೆಸಿದ ಚಾರಿತ್ರಿಕ ದಾಖಲೆ ಮತ್ತು ಕ್ಷೇತ್ರಕಾರ್ಯದ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಸರ್ಕಾರದ ಗೆಸೆಟಿಯರ್ ಸಂಶೋಧನಾ ಪ್ರಬಂಧ ದಿನಪತ್ರಿಕೆ, ನಿಯತಕಾಲಿಕೆ, ಬಿಡಿಲೇಖನ ಮುಂತಾದವುಗಳಿಂದ ಚಿನ್ನಹಗರಿ ನದಿ ಪರಿಸರದ ಸಾಂಸ್ಕೃತಿಕ ಚರಿತ್ರೆಯನ್ನು ಪರಿಶೀಲಿಸುವುದರ ಜೊತೆಗೆ ಅದರ ಭಾಗವಾಗಿ ಚಿನ್ನಹಗರಿ ನದಿಯನ್ನು ನೋಡುವ ವಿಧಾನ ಈ ಅಧ್ಯಯನಕ್ಕಿದೆ. ತಾಂತ್ರಿಕವಾಗಿ ಅನುಷಂಗಿಕ ಆಕರಗಳನ್ನು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಈವರೆಗೆ ನಡೆದ ಅಧ್ಯಯನಗಳನ್ನು ಅವಲೋಕಿಸಿದರೆ ಆ ಮೂಲಕ ಅಲ್ಲಲ್ಲಿ ಅಡಿ ಟಿಪ್ಪಣಿಗಳನ್ನು ಮಾಡಿಕೊಳ್ಳಲಾಗಿದೆ.

**ಸ್ವರೂಪ**

ಪ್ರಸ್ತುತ ಅಧ್ಯಯನವನ್ನು ಎಂಟು ಭಾಗಗಳಲ್ಲಿ ವಿಂಗಡಿಸಲಾಗಿದೆ. ಇದು ಅಧ್ಯಯನದ ಸಾರಾಂಶವನ್ನು ತಿಳಿಯಲು ಮಾಡಿದ ಪ್ರಯತ್ನವಾಗಿದೆ. ಈ ಎಂಟು ಭಾಗಗಳು ಒಳಗೊಂಡ ವಿಷಯ ಮತ್ತು ಅದರ ತಾತ್ವಿಕ ಸ್ವರೂಪ ಹೀಗಿದೆ.

ಒಂದನೇ ಅಧ್ಯಾಯದಲ್ಲಿ, ಅಧ್ಯಯನದ ಉದ್ದೇಶ, ವ್ಯಾಪ್ತಿ, ವಿಧಾನ ಹಾಗೂ ಸ್ವರೂಪವನ್ನು ವಿವರಿಸಲಾಗಿದೆ. ಇಲ್ಲಿ ಈ ಅಧ್ಯಯನದ ಅಗತ್ಯ ಮತ್ತು ಚರಿತ್ರೆಯ ಅಧ್ಯಯನ ವಿಧಾನಗಳ ಬಗ್ಗೆ ಚರ್ಚಿಸಲಾಗಿದೆ. ಚಿನ್ನಹಗರಿ ನದಿಯ ಹುಟ್ಟು ಭೌಗೋಳಿಕತೆ ಅದರ ಹರಿವು ಮತ್ತು ವಿಸ್ತಾರ ಹೀಗೆ ನದಿಯ ಸಮಗ್ರ ಪರಿಸರದ ಪರಿಚಯವನ್ನು ಎರಡನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ.

ಮೂರನೆಯ ಅಧ್ಯಾಯದಲ್ಲಿ, ಚಿನ್ನಹಗರಿ ನದಿ ಪರಿಸರದ ಪುರಾತತ್ವ ನೆಲೆಗಳನ್ನು ಕುರಿತು ತಿಳಿಸಲಾಗುತ್ತದೆ.ಚಿನ್ನಹಗರಿ ನದಿ ಉಗಮದಿಂದ ಅಂತ್ಯದವರೆಗೆ ಇಕ್ಕೆಲಗಳಲ್ಲಿ ಹಲವು ವಿಶಿಷ್ಟವಾದ ಇತಿಹಾಸ ಪೂರ್ವ, ಐತಿಹಾಸಿಕ ನೆಲೆಗಳನ್ನು ಇಲ್ಲಿ ಗುರುತಿಸಲಾಗುವುದು. ಅಂಥವುಗಳೆಂದರೆ ಗಂಜಿಗಟ್ಟೆ, ಚಿಪ್ಪಿನಕೆರೆ, ಸಂಗೇನಹಳ್ಳಿ, ಚಿಕ್ಕಮಲ್ಲನಹೊಳೆ, ಸಿದ್ದಯ್ಯನಕೋಟೆ, ಸಿದ್ದಾಪುರ, ಬ್ರಹ್ಮಗಿರಿ, ಜಟಂಗಿರಾಮೇಶ್ವರ, ಈ ನೆಲೆಗಳಲ್ಲಿನ ಮಹತ್ವದ ಅಂಶಗಳನ್ನು ಕುರಿತಂತೆ ಚರ್ಚಿಸಲಾಗುವುದು.

ನಾಲ್ಕನೇ ಅಧ್ಯಾಯವು ಪ್ರಾಚೀನ ಕನ್ನಡ ನಾಡನ್ನು ಆಳಿದ ಅರಸು ಮನೆತನಗಳಾದ ಮೌರ್ಯರು, ಕದಂಬರು, ಚಾಲುಕ್ಯ, ಹೊಯ್ಸಳ, ವಿಜಯನಗರ ಹಾಗೂ ಪಾಳೆಯಗಾರರು ಮುಂತಾದ ಅರಸರುಗಳು ತಮ್ಮ ತಮ್ಮ ಧಾರ್ಮಿಕ ಸಹಿಷ್ಣುತೆಯನ್ನು ಸಾರಲು ಈ ಪರಿಸರದ ಗೊಡಬನಹಾಳ್, ಕಲ್ಲೇದೇವರಪುರ, ಕಲ್ಲಹಳ್ಳಿ ಕಂಪಳದೇವರಹಟ್ಟಿ, ನುಂಕಮಲೆ, ಬ್ರಹ್ಮಗಿರಿ, ಜಟಿಂಗಿ ರಾಮೇಶ್ವರ ಮುಂತಾದ ಸ್ಥಳಗಳಲ್ಲಿ ಹಲವಾರು ದೇವಾಲಯಗಳನ್ನು ನಿರ್ಮಿಸುವುದರ ಜೊತೆಗೆ ಈ ಪ್ರದೇಶದಲ್ಲಿ ಸಾಂಸ್ಕೃತಿಕ ಮಹತ್ವವನ್ನು ಸಾರಲು ಹಲವಾರು ಹಬ್ಬ ಹರಿದಿನಗಳಂಥ ಆಚರಣೆಗಳನ್ನು ಕುರಿತಂತೆ ಈ ಅಧ್ಯಾಯನದಲ್ಲಿ ಅಭಿವ್ಯಕ್ತಿಸಲಾಗುವುದು.

ಚಿನ್ನಹಗರಿ ನದಿ ಪ್ರದೇಶದ ಕಲೆ ಮತ್ತು ವಾಸ್ತುಶಿಲ್ಪದ ಬಗೆಗೆ ಈ ನದಿ ಪರಿಸರದಲ್ಲಿ ಬರುವ ಕಲೆ ಯಾರ ಕಾಲಕ್ಕೆ ಸೇರಿದ್ದು ಮತ್ತು ವಾಸ್ತುಶಿಲ್ಪ ಎಂತದ್ದು ಯಾವ ಶೈಲಿಯಲ್ಲಿ ರಚನೆಯಾಗಿದೆ ಎಂಬುದರ ಬಗ್ಗೆ ಐದನೆ ಅಧ್ಯಾಯದಲ್ಲಿ ತಿಳಿಸಲಾಗುವುದು.

ಆರನೇ ಅಧ್ಯಾಯನದಲ್ಲಿ, ಬುಡಕಟ್ಟು ಸಂಸ್ಕೃತಿ ಬಗ್ಗೆ ವಿಶ್ಲೇಷಿಸಲಾಗುವುದು. ಚಿನ್ನಹಗರಿ ನದಿ ಬಹುಭಾಗ ಆವಾಸ ಸ್ಥಾನ ಬೇಡರದು. ಸಾಕಷ್ಟು ದೇವರುಗಳು ಗಂಗೆ ಪೂಜೆಗೆ ಈ ನದಿಯನ್ನು ಅವಲಂಬಿಸಿವೆ. ಅವರು ಪೋಷಿಸಿದ ಸಂಸ್ಕೃತಿ ರೂಢಿ, ಸಂಪ್ರದಾಯ, ಆಚರಣೆ, ನಡಾವಳಿಕೆ, ವಸತಿ ವ್ಯವಸ್ಥೆ, ವಿವಾಹ, ಆಡಳಿತ, ಸಾಹಿತ್ಯ, ಸಂಗೀತ, ಬೇಟೆ ಹಾಗೂ ವೈದ್ಯಕೀಯ ಪದ್ಧತಿ ಇವುಗಳ ಬಗ್ಗೆ ಈ ಅಧ್ಯಾಯದಲ್ಲಿ ನಿರೂಪಿಸಲಾಗಿದೆ.

ಏಳನೇ ಅಧ್ಯಾಯದಲ್ಲಿ ವಿವಿಧ ಸಮುದಾಯಗಳಲ್ಲಿ ಸಾಂಸ್ಕೃತಿಕ ಬಾಂಧವ್ಯದ ಬಗ್ಗೆ ಗಮನಹರಿಸಲಾಗುವುದು. ಈ ಪರಿಸರದ ಕೆಲವು ವಿಶಿಷ್ಟ ಕಾರ್ಯಕ್ರಮಗಳು ನಡೆಯುತ್ತವೆ.

ಅಲ್ಲಿ ಎಲ್ಲಾ ಸಮುದಾಯದ ಭಾಂದವರು ಭಾಗವಹಿಸುತ್ತಾರೆ. ಉದಾಹರಣೆಗೆ ದೇವಪುರದಹಟ್ಟಿ ಹಿರೇಗಂಟನೂರು, ಕಲ್ಲೇದೇವರಪುರ,ನುಂಕಮಲೆ ಜಟಂಗರಾಮೇಶ್ವರ ಮುಂತಾದ ಜಾತ್ರೆಗಳಲ್ಲಿ ಜರುಗುವ ರಥೋತ್ಸವ ಸಿದ್ದಭುಕ್ತಿ, ಸಿಡಿ, ಗಾವು, ರಾಶಿಪೂಜೆ, ಕಲ್ಯಾಣೋತ್ಸವಗಳಲ್ಲಿ ಎಲ್ಲಾ ಸಮುದಾಯದವರೂ ಭಾಗವಹಿಸಿ ವೈವಿಧ್ಯತೆಯಲ್ಲಿ ಏಕತೆ ತೋರಿಸುತ್ತಾರೆ. ಇಂತಹ ವಿಷಯದ ಬಗ್ಗೆ ಈ ಅಧ್ಯಾಯದಲ್ಲಿ ಚರ್ಚಿಸಲಾಗುವುದು.

ಅಧ್ಯಾಯ ಎಂಟರಲ್ಲಿ ಅಧ್ಯಯನದಲ್ಲಿ ಕಂಡುಕೊಂಡ ಒಟ್ಟು ಫಲಿತಗಳನ್ನು ಇಲ್ಲಿ ವಿಶ್ಲೇಷಿಸಲಾಗುವುದು. ಅನುಬಂಧದಲ್ಲಿ ಛಾಯಚಿತ್ರ, ನಕ್ಷೆಗಳನ್ನು ಕೊಡಲಾಗಿದೆ.

## ಅಧ್ಯಾಯ : ಎರಡು

# ಚಿನ್ನಹಗರಿ ನದಿಯ ಭೌಗೋಳಿಕ ಮತ್ತು ಚಾರಿತ್ರಿಕ ಹಿನ್ನೆಲೆ

ಚಿನ್ನಹಗರಿ ನದಿ ಅತೀ ಪುರಾತನ ಕಾಲದಿಂದಲೂ ಧಾರ್ಮಿಕ ಹಾಗೂ ಸಾಂಸ್ಕೃತಿಕವಾಗಿ ಮಹತ್ವ ಪಡೆದ ನದಿಯಾಗಿದೆ. ಚಿನ್ನಹಗರಿ ನದಿಗೆ ಹನೆಯತೊರೆ, ಚಿಕ್ಕಹಗರಿ, ಸಣ್ಣಹಗರಿ ಮತ್ತು ಜನಿಗೆಹಳ್ಳ ಎಂತಲೂ ಕರೆಯುತ್ತಾರೆ. ದಿವಂಗತ ಹುಲ್ಲೂರು ಶ್ರೀನಿವಾಸ ಜೋಯಿಸರು ಈ ನದಿಯನ್ನು "ಪಾಪವಿನಾಶಿನಿ" ಎಂದು ಉಲ್ಲೇಖಿಸಿದ್ದಾರೆ.[೧]

ಕೆಲವರು "ಚಿನ್ನಹಗರಿ ನದಿಗೆ ಸ್ತ್ರೀ ದೇವತೆಯ ಸ್ಥಾನವನ್ನು ಕಲ್ಪಿಸಿದ್ದಾರೆ. ಚಿನ್ನ ಎಂದರೆ ಭಾಷಿಕವಾಗಿ ಕನ್ನಡದಲ್ಲಿ ಹೊನ್ನುಬಂಗಾರವಾದರೂ ಪ್ರಸ್ತುತ ಅದಲ್ಲವಾಗಿದೆ. 'ಚಿನ್ನಮ್ಮ' ಎಂಬ ಬುಡಕಟ್ಟು ದೇವತೆ ಈ ಭಾಗದಲ್ಲಿ ಪೂಜಾರ್ಹಳಾಗಿದ್ದು, ಜನರು ಕ್ರಮೇಣ ಅದೇ ನಾಮದಿಂದ ವಾಚಿಸಿರಬಹುದು. ಹಿರಿಜೊನ್ನಮ್ಮ>ಹಿರಿಚಿನ್ನಮ್ಮ>ಇರಿಚಿನ್ನಮ್ಮ>ಚಿನ್ನಮ್ಮ ಆಗಿರಬಹುದು. ಜೊನ್ನಮ್ಮ ಆಂಧ್ರದಲ್ಲಿ ಪ್ರಸಿದ್ದವಾದ ದೇವತೆಯಾಗಿದ್ದಾಳೆ. ಇವಳನ್ನು ೧೨ ಮತ್ತು ೧೩ ನೇ ಶತಮಾನದ ವಚನಕಾರ ಜೊನ್ನಯ್ಯನ ಸಹೋದರಿ ಎನ್ನಲಾಗಿದೆ."[೨]

ಕನ್ನಡದ ಶ್ರೇಷ್ಠ ವಚನಕಾರ ಮಗ್ಗೆಯ ಮಾಯಿದೇವನು ಮೂರು ನದಿಗಳ ಮಧ್ಯೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಯಿತೆಂದು ತಮ್ಮ ಕೃತಿಗಳಲ್ಲಿ ಉಲ್ಲೇಖಿಸಿದ್ದಾರೆ. ಅವುಗಳೆಂದರೆ ತುಂಗಭದ್ರಾ, ಚಿನ್ನಹಗರಿ, ವೇದಾವತಿ. ಆದರೆ ಭೂಗರ್ಭ ಶಾಸ್ತ್ರಜ್ಞರ ಪ್ರಕಾರ ಚಿನ್ನದ ನಿಕ್ಷೇಪಗಳಿದ್ದವೆಂದು ಅದಕ್ಕಾಗಿ ಚಿನ್ನಹಗರಿ ಎಂದು ಕರೆದಿರಬಹುದು.

ಇದರ ನಾಮನಿಷ್ಪತ್ತಿ ಬಹುಶಃ ಈ ರೀತಿ ಇರಬಹುದು ಬುಡಕಟ್ಟು ಜನರು ಬೇಟೆಯಿಂದ ಸ್ಥಿತ್ಯಂತರಗೊಂಡು, ಪಶುಪಾಲನೆಯನ್ನು ಕೈಕೊಂಡಾಗ ಕೆಲವು ಪಶುಗಳ ನಾಮಗಳನ್ನೇ ಬಳಸಿರುವುದುಂಟು. ಉದಾಹರಣೆಗೆ ಎತ್ತಿನಹಟ್ಟಿ,ಕುರಿಹಟ್ಟಿ,ಪೆಯಿಲಾರಹಟ್ಟಿ ಇತ್ಯಾದಿ ಇಲ್ಲಿ ಜನ್ನಿಗೆ ಎಂದರೆ ಗೋವುಗಳ ಒಂದು ತಳಿ ಎಂದರ್ಥ. ಇವು ನೋಡಲು ಸುಂದರವಾಗಿರುತ್ತವೆ. ಹಾಗಾಗಿ ಜನ್ನಿಗೆ ಎಂದರೆ ದೇವರಿಗೆ ಮೀಸಲಾಗಿ ಬಿಟ್ಟ ಗೋವು ಮತ್ತು ಅದರ ಹಾಲು ಎನ್ನಲಾಗಿದೆ.[೩]

"ಜನಿಗೆಹಳ್ಳಕ್ಕೆ ಶಾಸನಗಳಲ್ಲಿ 'ಹನೆಯತೊರೆ' ಎಂಬ ಉಲ್ಲೇಖವಿದೆ.ಇಸಿಲಾಪಟ್ಟಣಕ್ಕೆ ೧೦– ೧೧ನೇ ಶತಮಾನದ ಹೊತ್ತಿಗೆ ಹನೆಯಪಟ್ಟಣವೆಂಬುದಾಗಿ ಕರೆಯುತ್ತಿದ್ದು ಇದರ ಬಳಿ ಹರಿಯುತ್ತಿದ್ದ ನದಿಯನ್ನು ಹನೆಯತೊರೆಯೆಂದು ಕರೆಯಲಾಗುತ್ತಿತ್ತು. ಜಿನಗಿಹಳ್ಳ ಹುಟ್ಟುವ ಓಬಳದೇವರ ಗುಡ್ಡವು ಜೋಗಿಮಟ್ಟಿಯ ಪಕ್ಕದಲ್ಲಿದೆ. ಜಿನಗಿಹಳ್ಳವೆಂದು ಹೆಸರು ಬರಲು ಕಾರಣ ಸದಾ ಕಾಲ

ನೀರು ಒಸರುತ್ತದೆ(ಜಿನಗು,ಜೌಗು) ಯಾವಾಗಲು ಹಳ್ಳ ಹರಿಯುತ್ತಲೇ ಇರುತ್ತದೆ. ಜಿನಗಿಹಳ್ಳ ಉದ್ಭವದ ಸ್ಥಳಕ್ಕೆ ಸಮೀಪದಲ್ಲೇ ಓಬಳದೇವರಗುಡಿ ಇದೆ. ಈ ಗುಡಿಯ ಸುತ್ತಮುತ್ತ ಜೇನು ಹುಟ್ಟುಗಳಿದ್ದು ದೇವರಿಗೆ ಜೇನು ತುಪ್ಪವನ್ನು ಎಡೆ ಮಾಡುವ ನಂಬಿಕೆ ಸ್ಥಳೀಯರಲ್ಲಿ ಇದೆ.

ಓಬಳದೇವರಿಗೆ ನೈವೇದ್ಯ ಮಾಡಲು ಒಬ್ಬ ಮಹಿಳೆ ಆನೆಯ ಮೇಲೆ ಜಿನ್ನಿಗೆ ತೆಗೆದುಕೊಂಡು ಹೋಗುವಾಗ ಬೆಟ್ಟ ಹತ್ತಲಾಗದೆ ಮಾರ್ಗ ಮಧ್ಯದಲ್ಲಿಯೇ ಆನೆ ಮತ್ತು ಮಹಿಳೆ ಸಾವನ್ನು ಅಪ್ಪುತ್ತಾರೆ. ಏನು ಆನೆ ಮೇಲೆ ತೆಗೆದುಕೊಂಡ ಹೋದ ಜನ್ನಿಗೆ ಜಿನಿ,ಜಿನಿಯಾಗಿ ಹರಿಯುತ್ತದೆ ಅದೇ ಪ್ರದೇಶ "ಆನೆ ಜರಲು" ಎಂದು ಪ್ರಸಿದ್ದಿಯಾಗಿದೆ ಎಂದು ಸ್ಥಳೀಯರಿಂದ ತಿಳಿಯುತ್ತದೆ ಹಾಗಾಗಿ ಹರಿಯುವ ನದಿ ಜಿನಿಗೆಹಳ್ಳ ಎಂದು ರೂಢಿಯಾಗಿದೆ. ನಾಯಕ ಬುಡಕಟ್ಟು ವೀರ ಯರಮಂಚನಾಯಕನಿಗೆ ಚಿತ್ತಯ್ಯ-ಕಾಟಯ್ಯ ಜನಿಗೆ ಹಾಲನ್ನು ಕರೆದು ಆನೆ ಮೇಲೆ ಹಾಲು ಮೊಸರನ್ನು ಹೇರಿಕೊಂಡು ಬರುವಾಗ ಹಾಲು ಮೊಸರು ಹಳ್ಳವಾಗಿ ಹರಿಯಿತು. ಹರಿದ ಹಳ್ಳಕ್ಕೆ ಜನಿಗೆಹಳ್ಳವೆಂದು ಶಾಸನ ಬರೆಸಿದನು. ಚಿತ್ರದುರ್ಗ ಜಿಲ್ಲೆಯ ಅತ್ಯಂತ ಪ್ರಾಚೀನ ಕೆರೆಗಳಲ್ಲಿ ಭೀಮಸಮುದ್ರ ಕೆರೆಯೂ ಒಂದಾಗಿದೆ. ವಿಜಯನಗರ ಚಕ್ರವರ್ತಿ ೨ನೇ ಹರಿಹರರಾಯನ ಮಗನಾದ ಕಂಪಣ್ಣೊಡೆಯನು ಚಮ್ಮತ್ತೂರುಕಲ್ಲ ರಾಜ್ಯವನ್ನು ಆಳುತ್ತಿದ್ದಾಗ ಅವನ ಮನೆಯ ಪ್ರಧಾನಿಯಾಗಿದ್ದ ಲಕ್ಷೀಧರ ಪಂಡಿತನು ಕ್ರಿ.ಶ. ೧೩೯೨ರಲ್ಲಿ ಕಕ್ಕೆಯ ಹರವಿನ ಬಳಿ ಜನ್ನಿಗೆಹಳ್ಳಕ್ಕೆ ಅಡ್ಡಕಟ್ಟಿ ಅದರ ದಿಕ್ಕನ್ನು ಬದಲಿಸಿ ಹುಂಕುಂದ(ಭೀಮಸಮುದ್ರ)ದ ಕೆರೆಗೆ ಹರಿದು ಬರುವಂತೆ ಮಾಡಿದನೆಂದು ಶಾಸನಗಳಿಂದ ತಿಳಿದುಬರುತ್ತದೆ. ನಾಯಕನಹಟ್ಟಿ ಬಖೈರುನಲ್ಲಿ "ಗುರು ಗುಹೇಶ್ವರ ಬೆಟ್ಟಕ್ಕೆ ಪೂರ್ವಭಾಗ ಯೇಳು ಜಂಬ್ಬಿ ಜಿನ್ನಿಗೆಹಳ್ಳ ಯಿವಗಳ ಮಧ್ಯದಲ್ಲಿಯೀ ಕಂಪಳಕ್ಕೆ ಹಟ್ಟಿಕೊಂಡು"ಎಂಬ ಉಲ್ಲೇಖವಿದೆ.[೫]

ಈ ಜನಿಗೆಹಳ್ಳ ಅಥವಾ ಚಿನ್ನಹಗರಿ ನದಿಯೂ ಚಿತ್ರದುರ್ಗದ ಪಶ್ಚಿಮ ಬೆಟ್ಟ ವಾದಓಬಳದೇವರ ಗುಡ್ಡದಲ್ಲಿ ಹುಟ್ಟಿ ಉಪ್ಪನಾಯಕನಹಳ್ಳಿ, ಓಬಳಾಪುರ, ನಂದಿಪುರ, ಸೊಂಡೆಕೊಳ, ಗೊಡಬನಹಾಳ್, ದೇವರಪುರದಹಟ್ಟಿ, ಹುಲ್ಲೂರು, ಸಿಂಗಾಪುರ, ಸಾದರಹಳ್ಳಿ, ಕಾತ್ರಾಳು, ಸಂಗೇನಹಳ್ಳಿಕೆರೆ ಮೂಲಕ ಹರಿದು ದೋಣಿಹಳ್ಳಿ,ಮಲ್ಲಾಪುರದಿಂದ ಕಲ್ಲಹಳ್ಳಿ ಮೂಲಕ ಬಳ್ಳಾರಿ ಜಿಲ್ಲೆಯನ್ನು ಪ್ರವೇಶಿಸುತ್ತದೆ. ನಂತರ ತಿಪ್ಪೇಹಳ್ಳಿ, ಹೊಡೇಂ, ಕುಮತಿ, ಚಿಕ್ಕೋಬನಹಳ್ಳಿ, ಕಂಪಳದೇವರಹಟ್ಟಿ, ವಲಸೆ, ಮೀನಕೆರೆ, ಕೊಂಬೆಹಳ್ಳಿ, ಗಡ್ಡದಬೋರಯ್ಯನಹಟ್ಟಿ, ನುಂಕನಹಳ್ಳಿ, ಮಾರಮ್ಮನಹಳ್ಳಿ ಮೂಲಕ ಹರಿದು ರಂಗಯ್ಯನದುರ್ಗ ಜಲಾಶಯ ಸೇರುತ್ತದೆ. ಹೀಗೆ ಹರಿಯುವಾಗ ಕುಮತಿಯವರೆಗೆ ಜಿನ್ನಿಗೆಹಳ್ಳವೆಂದು ಅಲ್ಲಿಂದ ಮುಂದೆ ಚಿನ್ನಹಗರಿ ಎಂದು ಕರೆಯಲಾಗುತ್ತದೆ. ಈ ಸಂದರ್ಭದಲ್ಲಿ ಜಗಳೂರಿನಿಂದ ಹಿಡಿದು ಜರುಮಲೆ, ಗುಡೇಕೋಟೆ,ಕಾನಾಮಡಗು ಆಲೂರು, ಹುಲಿಕೆರೆ, ಸಕಲಾಪುರದಹಟ್ಟಿ, ಖಾನಾಹೊಸಹಳ್ಳಿ, ಇಮ್ಮಡಾಪುರ, ಚಿಕ್ಕಜೋಗಿಹಳ್ಳಿ,

ಕುರಿಹಟ್ಟಿ,ಭೀಮಸಮುದ್ರ,ಕಾಟ್ರಹಳ್ಳಿ ಕಡೆಯ ಅನೇಕ ಚಿಕ್ಕ ಚಿಕ್ಕ ಹಳ್ಳಗಳು ಈ ನದಿಗೆ ಬಂದು ಸೇರುತ್ತದೆ.ಅವುಗಳೆಂದರೆ ಕಳ್ಳರಹಳ್ಳ, ಉಪ್ಪಾರಹಳ್ಳ, ಹೆಂಡ ಕಟ್ಟುವವರ ಹಳ್ಳ, ಹೊಡೇಂಹಳ್ಳ, ಕುಮತಿಹಳ್ಳ ಅಥವಾ ಪೆದ್ದವಂಕ (ದೊಡ್ಡಹಳ್ಳ), ಮಾರವ್ವನಹಳ್ಳ, ಮರಳುಹಳ್ಳ(ಮಳಲುವಂಕ)ಗಳು ಪ್ರಮುಖವಾದವುಗಳು.

ರಂಗಯ್ಯನದುರ್ಗದ ಜಲಾಶಯವನ್ನು ಹುರಡಿಹಳ್ಳಿ ಬಳಿ ೧೯೭೬ರಲ್ಲಿ ಅಂದಿನ ಮುಖ್ಯಮಂತ್ರಿಗಳಾದ ದೇವರಾಜ ಅರಸು ಕಾಲದಲ್ಲಿ ನಿರ್ಮಾಣ ಮಾಡಲಾಗಿದೆ. ಅಣೆಕಟ್ಟು ನಿರ್ಮಾಣಕ್ಕೆ ಮೊಳಕಾಲ್ಮುರು ಕ್ಷೇತ್ರದ ಶಾಸಕರಾದ ಪಟೇಲ್ ಪಾಪನಾಯಕರ ಶ್ರಮವು ಅಪಾರವಾದುದು. ಇದರಿಂದ ಸುಮಾರು ಒಂಬತ್ತು ಸಾವಿರ ಎಕರೆಗಳಿಗೆ ನೀರಾವರಿ ಸೌಲಭ್ಯ ದೊರೆಯುತ್ತದೆ. "ಇದೊಂದು ಬಡನದಿ ಮಳೆಗಾಲದಲ್ಲಿ ಮಾತ್ರ ತುಂಬಿ ಹರಿಯುವುದರಿಂದ "ಅಘಹರಿ" ಎಂದು ಕರೆಯುತ್ತಾರೆ"[೬] ಬೇಸಿಗೆಯಲ್ಲಿ ಬತ್ತಿಹೋಗುತ್ತದೆ. ನದಿ ಉದ್ದಕ್ಕೂ ಮೊಡವುಗಳಿಂದ ನೀರು ತುಂಬಿಕೊಂಡಿರುತ್ತದೆ. ಸುಮಾರು ೧೬೯ ಕೀಲೋ ಮೀಟರ್ ಹರಿಯುವ ಈ ನದಿಯು ಜಟಂಗಿ ರಾಮೇಶ್ವರ ಮತ್ತು ಬ್ರಹ್ಮಗಿರಿಗಳ ಮಧ್ಯೆ ವಿಶಾಲವಾಗಿ ಹರಿದು ರೊಪ್ಪ, ಮಾಚೇನಹಳ್ಳಿ ಮೂಲಕ ಆಂಧ್ರಪ್ರದೇಶವನ್ನು ಪ್ರವೇಶಿಸುತ್ತದೆ. ಆಂಧ್ರಪ್ರದೇಶದಲ್ಲಿ ವೇದಾವತಿ ನದಿಯೊಂದಿಗೆ ಸೇರಿಕೊಂಡು ಮುಂದೆ ಸಿರುಗುಪ್ಪ ಬಳಿ ತುಂಗಭದ್ರ ನದಿಯನ್ನು ಸೇರುತ್ತದೆ. ಕೊನೆಗೆ ಬಂಗಾಳ ಕೊಲ್ಲಿಯಲ್ಲಿ ಲೀನವಾಗುತ್ತದೆ. ಈ ನದಿಗೆ ಗೊಡಬನಹಾಳ್, ದೇವರಪುರದಹಟ್ಟಿ, ಕಾತ್ರಾಳು, ದೋಣಿಹಳ್ಳಿ, ಕಲ್ಲಹಳ್ಳ, ಮಲ್ಲಾಪುರ, ಹೊಡೇಂ, ಚಿಕ್ಕೋಬನಹಳ್ಳಿ, ಸಿದ್ದಯ್ಯನಕೋಟೆ, ಅಮಕುಂದಿ, ಅಶೋಕಸಿದ್ದಾಪುರದ ಹತ್ತಿರ ಮೇಲು ಸೇತುವೆಯನ್ನು ಕಟ್ಟಲಾಗಿದೆ. ಹಾಗೂ ನಂದಿಪುರ, ಹುಲ್ಲೂರು, ಹಿರೇಗುಂಟನೂರು, ಬೆಟ್ಟದ ನಾಗೇನಹಳ್ಳಿ, ಲಕ್ಷ್ಮೀಸಾಗರ, ಚಿಕ್ಕಪುರ, ಸಾದರಹಳ್ಳಿ ಕ್ಯಾಸಾಪುರ, ಕಾತ್ರಾಳು, ಸಂಗೇನಹಳ್ಳಿ, ಹಿರೇಮಲ್ಲನಹಳ್ಳಿ, ಕುಮತಿ, ನಾಗಸಮುದ್ರಗಳಲ್ಲಿ ನದಿಗೆ ಕೆರೆ ಕಟ್ಟಲಾಗಿದೆ. ಕಾತ್ರಾಳು ಕೆರೆಯನ್ನು ಮೈಸೂರು ಮಹಾರಾಜರಾದ ನಾಲ್ವಡಿ ಕೃಷ್ಣರಾಜರ ಕಾಲದಲ್ಲಿ ಕಟ್ಟಿಸಲಾಗಿದೆ.

ಈ ಪರಿಸರದ ಜನರು ಮೀನುಗಾರಿಕೆಯನ್ನು ಮಾಡುವುದರೊಂದಿಗೆ ಅಲ್ಲಿ ಬೆಳೆದ ಆಪನ್ನು ಕೊಯ್ದು ಚಾಪೆ ಎಣಿಯುತ್ತಿದ್ದರು. ಈಡಿಗ, ಕೊರಚ, ಲಂಬಾಣಿ ಇತರ ಸಮುದಾಯದವರು ಈ ನದಿಯಲ್ಲಿದ್ದ ಈಚಲು ಮರಗಳಿಂದ ಹೆಂಡವನ್ನು ತೆಗೆಯುತ್ತಿದ್ದರು ಅಲ್ಲದೆ ಈಚಲು ಗರಿಗಳನ್ನು ಕೊಯ್ದು ಈಚಲು ಚಾಪೆ ಮಾಡುವ ಕೊರಚರು, ಹರಿಜನರು ಹಾಗೂ ಲಂಬಾಣಿಗರು ಈ ಪ್ರದೇಶದ ಕೆಲಭಾಗದಲ್ಲಿ ಕಂಡುಬರುತ್ತಿದ್ದಾರೆ. ಕೆಲವು ವ್ಯಾಪಾರಿಗಳು ಈ ನದಿಯಲ್ಲಿನ ಮರಳನ್ನು ಮಾರಿಕೊಂಡು ಶ್ರೀಮಂತರಾದವರನ್ನು ಕಾಣಬಹುದು. ಈ ನದಿ ಮಣ್ಣು ನೀರಿನಿಂದ ಇಟ್ಟಿಗೆ ಭಟ್ಟಿ ಮಾಡತ್ತಾರೆ ಅವರಿಗೆ ಇದರಿಂದಾದ ಲಾಭ ಅಪಾರ. ಕೂಡ್ಲಿಗಿ ತಾಲ್ಲೂಕು ಮತ್ತು ಮೊಳಕಾಲ್ಮುರು

ತಾಲ್ಲೂಕಿನಾದ್ಯಂತ ಈ ನದಿಯ ಇಕ್ಕೆಲಗಳಲ್ಲಿ ಬಾವಿ ತೋಡಿ ನದಿ ನೀರನ್ನು ಕಪಿಲೆ ಮೂಲಕ ನೀರಾವರಿಗೆ ಬಳಸಿಕೊಳ್ಳುತ್ತಿದ್ದರು. ಅಂಥ ಬಾವಿಗಳು ಇಂದು ನದಿ ನೀರಿನ ಅಭಾವದಿಂದ ಹಾಳುಬಿದ್ದಿವೆ. ಏತನೀರಾವರಿ ಯೋಜನೆಯ ಮೂಲಕ ಸಂಘ ಸಂಸ್ಥೆಗಳು ಕೊಲಮ್ಮನಹಳ್ಳಿ, ದೋಣಿಹಳ್ಳಿ, ಕಾತ್ರಿಕೆಹಟ್ಟಿ ,ಸಿದ್ದಯ್ಯನಕೋಟೆ,ಅಮಕುಂದಿ ವಾಟರ್ ಶೆಡ್ ಮತ್ತು ಚೆಕ್ ಡ್ಯಾಂಗಳನ್ನು ಕಟ್ಟಲಾಗಿರುವುದರಿಂದ ರೈತರ ಬಾವಿಯಲ್ಲಿ ನೀರು ಬತ್ತಿ ಹೋಗುವುದು ಕಡಿಮೆಯಾಗಿದೆ. ರಂಗಯ್ಯನದುರ್ಗ ಜಲಾಶಯದಿಂದ ಮೊಳಕಾಲ್ಮುರು ನಗರಕ್ಕೆ ಸೂಲೇನಹಳ್ಳಿ ಬಳಿ ಶುದ್ದೀಕರಣ ಮನೆ ನಿರ್ಮಿಸಿ ಸಿಹಿ ನೀರನ್ನು ಕೊಡಲಾಗುತ್ತಿದೆ. ಸದಾ ಬರಗಾಲ ಕಾಣುವ ಈ ಪರಿಸರದಲ್ಲಿ ಈ ನದಿಯಿಂದ ಸಮೃದ್ದಿ ಕೃಷಿ ಫಸಲು ರೈತರಿಗೆ ಸಿಕ್ಕಿಲ್ಲವಾದರೂ ಸಾಂಸ್ಕೃತಿಕವಾಗಿ ಶ್ರೀಮಂತವಾಗಿದೆ.

### ಚಾರಿತ್ರಿಕ ಹಿನ್ನೆಲೆ

ಚಿನ್ನಹಗರಿ ನದಿ ಅತಿ ಪುರಾತನ ಕಾಲದಿಂದಲೂ ಸಾಂಸ್ಕೃತಿಕ ಮಹತ್ವ ಪಡೆದ ನದಿಯಾಗಿದೆ. ರಾಮಾಯಣ ಕಾಲದಲ್ಲಿ ಸೀತೆಯನ್ನು ರಾವಣ ಅಪಹರಿಸಿಕೊಂಡು ಹೋಗುವಾಗ ಜಟಾಯು ತಡೆದಿರುವ ಸ್ಥಳ ಜಟಂಗಿರಾಮೇಶ್ವರ ಬೆಟ್ಟದಲ್ಲಿದೆ ಎಂದು ದಂತಕಥೆಗಳು ಹೇಳುತ್ತವೆ."ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಚಿನ್ನಹಗರಿ ನದಿ ಎಡದಂಡೆ ಮೇಲಿರುವ "ಕುಮತಿ ಮತ್ತು ವಲಸೆ ಗ್ರಾಮಗಳ ಮಧ್ಯೆ ಅಪೂರ್ವ ಎನ್ನುವ ಎರಡು ರಾಕ್ಷಸ ಕಲ್ಲುಗಳಿವೆ. ಇವು ಬೃಹತ್ ಶಿಲಾ ಸಂಸ್ಕೃತಿಗೆ ಸೇರಿವೆ. ಇವುಗಳ ಬಗ್ಗೆ ಜನಾಂಗಿಕ ಕಥೆಗಳು ಅಪಾರವಾಗಿ ಹುಟ್ಟಿಕೊಂಡಿವೆ. ನುಂಕಪ್ಪನು ಬಿಲ್ಲಿಡಿದು ಬಾಣ ಹೊಡೆದ್ದುರಿಂದ ದುಷ್ಟರು ಅಲ್ಲೆ ನಿಂತರೆಂದು ಅವರು ಕುಮತಿ ಸಿದ್ದೇಶ್ವರನ ಭಕ್ತರೆಂದು ಕಥೆಗಳು ಹೇಳುತ್ತಿವೆ.[೭]

ಈ ಪರಿಸರದಲ್ಲಿ ಬರುವ ಪುರಾತತ್ವ ನೆಲೆಗಳಾದ ಚಿಕ್ಕಗೊಂಡನಹಳ್ಳಿ , ಗಂಜಿಗಟ್ಟೆ, ಬೊಗಳೆರಹಟ್ಟಿ, ಸಂಗೇನಹಳ್ಳಿ ಚಿಪ್ಪಿನಕೆರೆ, ಸಿದ್ದಯ್ಯನಕೋಟೆ, ತುಪ್ಪದಕ್ಕನಹಳ್ಳಿ, ಹಾನಗಲ್, ಅಕ್ಕಮ್ಮನಗುಡ್ಡ, ನುಂಕಮಲೆ, ಬ್ರಹ್ಮಗಿರಿ, ಜಟಂಗಿರಾಮೇಶ್ವರ ಮುಂತಾದವುಗಳು ಹಳೆಯಶಿಲಾಯುಗ, ಸೂಕ್ಷ್ಮ, ನವ/ತಾಮ್ರ ಶಿಲಾಯುಗ, ಬೃಹತ್ ಶಿಲಾಯುಗ, ಇತಿಹಾಸ ಕಾಲದಲ್ಲಿ ಕಂಡುಬರುತ್ತವೆ.

### ಮೌರ್ಯರು

ಮೌರ್ಯರು ಕ್ರಿ.ಪೂ. ೨೨೦ ರಿಂದ ಕ್ರಿ.ಶ.೨೩೦ ರವರೆಗೆ ಆಳ್ವಿಕೆ ಮಾಡಿದರು. ಈ ಪರಿಸರದ ಬಹುಭಾಗವು ಮೌರ್ಯರ ಆಳ್ವಿಕೆಗೆ ಒಳಪಟ್ಟಿತು. ಸಿದ್ದಾಪುರದ ಬೃಹತ್ ಬಂಡೆಯ ಶಿಲಾಶಾಸನವನ್ನು ಮೌರ್ಯ ಚಕ್ರವರ್ತಿ ಅಶೋಕ ಈ ಪ್ರದೇಶದಲ್ಲಿ ಹೊರಡಿಸಿರುವುದು ಈ ಮೇಲಿನ ಹೇಳಿಕೆಯನ್ನು ಪುಷ್ಟೀಕರಿಸುತ್ತದೆ.

ಶೇಷಾದ್ರಿ ಮತ್ತಿತರ ಪ್ರಾಕ್ತನಶಾಸ್ತ್ರಜ್ಞರು ಹಾಗೂ ಇತಿಹಾಸಕಾರರು ಇಸಿಲನಗರ ಯಾವುದು? ಎಂಬ ಬಗ್ಗೆ ಸಂಶಯ ಮೂಡಿದಾಗ ಈಗಿನ ಬ್ರಹ್ಮಗಿರಿಯೇ 'ಇಸಿಲ' ನಗರವೆಂದು ಮಾರ್ಟಿಮರ್

ವೀಲ್ಹರ್ ಗುರುತಿಸಿದರು.[೮] ಚಂದ್ರವಳ್ಳಿ ಕೆರೆ–ಕಾಲುವೆ ಮಾಡುವಾಗ ಸೀಸದ ನಾಣ್ಯಗಳು ಸಿಕ್ಕವೆ. ಅವುಗಳನ್ನು ಅಧ್ಯಯನ ಮಾಡಿದ ಈ.ಜೆ.ರಾಪ್ಸನ್ ಇವು ಸು.೧೮೦೦ ವರ್ಷಗಳಷ್ಟು ಹಿಂದಿನವು ಎಂದು ಹೇಳಿದರು. ದಕ್ಷಿಣಾಪಥವು ವಾಣಿಜ್ಯ ದೃಷ್ಟಿಯಿಂದ ಪ್ರಾಮುಖ್ಯತೆಯನ್ನು ಪಡೆದಿದ್ದಿತು. ಇದನ್ನರಿತ ಮೌರ್ಯರು ಈ ಭಾಗದೊಂದಿಗೆ ನಿಕಟ ಸಂಪರ್ಕವನ್ನು ಹೊಂದಿದ್ದರು. ಅಶೋಕ ತನ್ನ ಅಧೀನದಲ್ಲಿದ್ದ ಪ್ರದೇಶದಲ್ಲಿ ಆಡಳಿತಾತ್ಮಕ ಸಾಮಾಜಿಕ ಆರ್ಥಿಕ ವಿಚಾರಗಳ ಬಗ್ಗೆ ಸಾಕಷ್ಟು ಗಮನಹರಿಸಿದ್ದರು. ಅಲ್ಲದೆ ವಿಶೇಷವಾಗಿ ಧಾರ್ಮಿಕ ಕ್ಷೇತ್ರಕ್ಕೆ ಹೆಚ್ಚಿನ ಆಸ್ಥೆವಹಿಸಿದ್ದನು.ಮೇಲಿನ ಎಲ್ಲಾ ವಿಚಾರಗಳಿಗೆ ಸಂಬಂಧಿಸಿದಂತೆ ಸುವರ್ಣಗಿರಿ ಮತ್ತು ಇಸಿಲಗಳು ಕೇಂದ್ರಗಳಾಗಿದ್ದವು. ಈ ಕೇಂದ್ರಗಳ ಮೂಲಕ ತನ್ನೆಲ್ಲ ಕೆಲಸ ಕಾರ್ಯಗಳನ್ನು ನೆರವೇರಿಸಿ ನಿಯಂತ್ರಿಸುತ್ತಿದ್ದನು. ಈ ನಿಟ್ಟಿನಲ್ಲಿ ಮೌರ್ಯ ಸಾಮ್ರಾಟರ ಉದಾರ ಧ್ಯೇಯಗಳು ಅದರಲ್ಲೂ ಅವರ ಧಾರ್ಮಿಕ ಸಹಿಷ್ಣತೆ ಇಲ್ಲಿನ ಜನತೆಗೆ ಆದರ್ಶ ಮತ್ತು ಅನುಕರಣೀಯವಾದವು.

**ಶಾತವಾಹನರು**

ಒಂದು ಮತ್ತು ಎರಡನೇಯ ಶತಮಾನದಲ್ಲಿ ಶಾತವಾಹನರು ಇಲ್ಲಿ ಆಳ್ವಿಕೆ ಮಾಡಿರುವುದನ್ನು ಕಾಣಬಹುದು. ಶಾತವಾಹನರ ಬಗ್ಗೆ ಶಾಸನಗಳು ಲಭ್ಯವಾಗದಿದ್ದರೂ ಅವರು ಬಿಟ್ಟುಹೋದ ಪ್ರಾಚ್ಯ ಅವಶೇಷಗಳಿಂದ ಅವರ ಆಳ್ವಿಕೆಯ ಕುರುಹುವನ್ನು ತಿಳಿಯಬಹುದು. ಚಿಪ್ಪಿನಕೆರೆ ಹಾಗೂ ಸಂಗೇನಹಳ್ಳಿ ಇವರ ಕಾಲದ ನೆಲೆಗಳಾಗಿವೆ. ಇಲ್ಲಿನ ಜನರು ಹೊರದೇಶದೊಂದಿಗೆ ವ್ಯಾಪಾರ ವಹಿವಾಟು ಇಟ್ಟಿಕೊಂಡಿದ್ದರು. ಅದರಲ್ಲೂ ದಕ್ಷಿಣ ಭಾರತದೊಡನೆ ವಿಶೇಷ ಸಂಪರ್ಕವಿರಿಸಿಕೊಂಡಿದ್ದರು.

**ಕದಂಬರು**

ಪ್ರಾಚೀನ ಕರ್ನಾಟಕದ ಮೊದಲ ಅರಸು ಮನೆತನವೆಂದು ಪ್ರಸಿದ್ಧಿ ಪಡೆದ ಕದಂಬರು ೪ ನೇ ಶತಮಾನದಿಂದ ೯ನೇ ಶತಮಾನದವರೆಗೆ ಆಳ್ವಿಕೆ ಮಾಡಿದರು. ಕ್ರಿ.ಶ.೩೫೦ರಲ್ಲಿ ಹೊರಡಿಸಿದ ಚಂದ್ರವಳ್ಳಿ ಶಾಸನ ಇವರ ಬಗ್ಗೆ ಬೆಳಕು ಚೆಲ್ಲುತ್ತದೆ. ಕದಂಬರ ರಾಜಧಾನಿಯಾದ 'ಉಚ್ಚಂಗಿದುರ್ಗ' ಮೊಳಕಾಲ್ಮುರು ತಾಲ್ಲೂಕಿನಲ್ಲಿದೆ.ಇದರ ಬಗ್ಗೆ ವಿದ್ವಾಂಸರಲ್ಲಿ ತಾತ್ವಿಕ ಭಿನ್ನಾಭಿಪ್ರಾಯಗಳಿವೆ.[೯] ನುಂಕಮಲೆ ಬೆಟ್ಟದ ಮಲ್ಲಿಕಾರ್ಜುನ ಗುಡಿ ಹಿಂದೆ ಶಾಸನ ಇದೆ. ಇದು ಅಜವರ್ಮನು ಚಾಲುಕ್ಯರ ಜಯಸಿಂಹನ ಅಧೀನನಾಗಿ ಆಳ್ವಿಕೆ ಮಾಡುತ್ತಿದ್ದನು ಎಂದು ಹೇಳುತ್ತದೆ ಕ್ರಿ.ಶ.೧೦೮೦ ಬಂಚರಸದೇವನು ನುಂಕೆಮಲೆಯನ್ನು ಆಳುತ್ತಿದ್ದನು."[೧೦] ಬನವಾಸಿ ಪುರಾವರಾಧೀಶ್ವರನೆಂದು ಶರಣಾಗತ, ವಜ್ರಪಂಜರ, ನುಡಿದಂತೆ ನಡೆವಗಂಡ, ಗಂಡಭೇರುಂಡ ಕಲಿಗಳಾಭರಣ, ಮುಂತಾದ ಬಿರುದುಗಳಿದ್ದವು. ಒಟ್ಟಿನಲ್ಲಿ ಕ್ರಿ.ಶ.೧೦–೧೧ನೇ ಶತಮಾನಗಳಲ್ಲಿ ಇವರ ಸಣ್ಣ ಶಾಖಾ

ಮನೆತನವೊಂದು ಮೊಳಕಾಲ್ಮುರು ಪ್ರದೇಶ ಮತ್ತು ಅದರ ಸುತ್ತಮುತ್ತಲಿನ ಭಾಗಗಳನ್ನು ನುಂಕೆಮಲೆಯನ್ನು ಕೇಂದ್ರವಾಗಿಟ್ಟುಕೊಂಡು ಆಳ್ವಿಕೆ ನಡೆಸಿದ್ದಾರೆ.

**ಬಾದಾಮಿ ಚಾಲುಕ್ಯರು**

ಬಾದಾಮಿ ಚಾಲುಕ್ಯರು ಈ ಪರಿಸರದಲ್ಲಿ ಆಳ್ವಿಕೆ ಮಾಡಿರುವುದು ಕಂಡುಬರುತ್ತದೆ. ಪಲ್ಲವ ಚಾಲುಕ್ಯರ ಪರಸ್ಪರ ಹೋರಾಟದ ಬೀಡಾಗಿತ್ತು. ಅವರ ಕುರುಹುಗಳಿಂದ ಚಾಲುಕ್ಯರ ಬಗ್ಗೆ ತಿಳಿಯಬಹುದು. ಒಟ್ಟಿನಲ್ಲಿ ಇವರ ಆಳ್ವಿಕೆಗೊಳಪಟ್ಟ ಪ್ರದೇಶಗಳಲ್ಲಿ ರಾಜಕೀಯ ಮತ್ತು ಸಾಂಸ್ಕೃತಿಕ ಕ್ಷೇತ್ರಗಳು ಸಮೃದ್ಧವಾಗಿ ಬೆಳೆದು ಕರ್ನಾಟಕ ಇತಿಹಾಸದಲ್ಲಿ ತಮ್ಮದೆ ಆದ ಸ್ಥಾನವನ್ನು ಉಳಿಸಿಕೊಂಡಿವೆ.

**ರಾಷ್ಟ್ರಕೂಟರು**

ರಾಷ್ಟ್ರಕೂಟರು ೮ನೇ ಶತಮಾನದಿಂದ ೧೦ನೇ ಶತಮಾನದವರೆಗೆ ಈ ಪ್ರದೇಶದಲ್ಲಿ ಆಳ್ವಿಕೆ ಮಾಡಿದರು. "ಜಟಿಂಗರಾಮೇಶ್ವರ ಶಾಸನ ಕ್ರಿ.ಶ.೯೪೧ ರಲ್ಲಿ ಶಾಸನ ೨ನೇ ಕೃಷ್ಣನ ಬಗ್ಗೆ ಹಾಗೂ ರಾಮೇಶ್ವರ ದೇವಾಲಯಗಳು ಇವರ ಬಗ್ಗೆ ಬೆಳಕು ಚೆಲ್ಲುತ್ತವೆ."[೧೧] ಗೊಡಬನಹಾಳ್ ಶಾಸನವೂ ಭಾರತವನ್ನು ಭರತಖಂಡವೆಂದು ಉಲ್ಲೇಖಿಸಿದೆ. ಒಟ್ಟಿನಲ್ಲಿ ಮೇಲಿನ ಆಧಾರಗಳಿಂದ ರಾಷ್ಟ್ರಕೂಟರ ಆಳ್ವಿಕೆಗೆ ಈ ಪ್ರದೇಶವು ಒಳಗೊಂಡಿದ್ದಿತ್ತೆಂದು ಹೇಳಬಹುದು.

**ಕಲ್ಯಾಣಿ ಚಾಲುಕ್ಯರು**

ಕಲ್ಯಾಣದ ಚಾಲುಕ್ಯರ ಮನೆತನಕ್ಕೆ ಸಂಬಂಧಿಸಿದ ಶಾಸನಗಳು ಇಲ್ಲಿಯವರಗೆ ದೊರೆತಿಲ್ಲ. ಆದರೆ ನುಂಕಮಲೆಯಲ್ಲಿನ ಮಲ್ಲಿಕಾರ್ಜುನ ದೇವಾಲಯ, ಹಿರೇಕೆರೆಹಳ್ಳಿ, ಕನ್ನೆರಮ್ಮನ ದೇವಾಲಯಗಳ ವಾಸ್ತುಶೈಲಿಯಿಂದ ಕಲ್ಯಾಣಿ ಚಾಲುಕ್ಯರ ಆಳ್ವಿಕೆಯನ್ನು ಗುರುತಿಸಬಹುದು. ಮೇಲಿನ ಆಧಾರಗಳಿಂದ ಈ ಪ್ರದೇಶವು ಸಹ ಕಲ್ಯಾಣಿ ಚಾಲುಕ್ಯರ ಆಳ್ವಿಕೆಗೊಳಪಟ್ಟಿದ್ದಿತ್ತೆಂದು ಹೇಳಬಹುದು.

**ನೊಳಂಬರು**

ನೊಳಂಬರು ಈ ಪರಿಸರದಲ್ಲಿ ಆಳ್ವಿಕೆ ಮಾಡಿದ ಬಗ್ಗೆ ಚಾರಿತ್ರಿಕ ದಾಖಲೆಗಳಿವೆ. ಅಶೋಕ ಸಿದ್ದಾಪುರದ ರಾಮಚಂದ್ರೇಶ್ವರ ದೇವಾಲಯದಲ್ಲಿರುವ ಶಾಸನ ೧೦೨೨ ಕಲ್ಯಾಣಿ ಚಾಲುಕ್ಯ ದೊರೆ ಜಗದೇಕಮಲ್ಲ ಅಥವಾ ಜಯಸಿಂಹದೇವನು ಸಾಮಾಂತನಾಗಿದ್ದ. ' ಜಗದೇಕಮಲ್ಲನೊಳಂಬ ಪಲ್ಲವ ಪೆರ್ಮಾಡಿಯನ್ನು ಮಹಾಶಬ್ಧ, ಪಲ್ಲವನ್ವಯ, ಶ್ರೀಪೃಥ್ವಿವಲ್ಲಭ, ಪಲ್ಲವಕುಲತಿಲಕ, ಅಮೋಘವಾಕ್ಯ,ಕಾಂಚಿಪುರಮೇಶ್ವರ, ಶ್ರೀಮದ್‌ಜಗದೇಕಮಲ್ಲ, ನೊಳಂಬ ವಿಪ್ರಕುಲ,

ನೂತನವೀರಲಕ್ಷ್ಮೀ, ತಭಜಚೆಲುವ, ನುಡಿಗೆ ತಪ್ಪದಗಂಡ, ಚಿಂತಾಮಣಿ, ಸತ್ಯನಾರಾಯಣ, ಪರಬಲಧೂಮಕೇತು, ದೀರ್ಘಾತಪೋ ಘಟಸರ್ಪ ಎಂದೆಲ್ಲಾ ವರ್ಣಿಸಿದೆ.[೧೨]

ಜಟಂಗಿ ರಾಮೇಶ್ವರ ೧೦೩೨ ಶಾಸನ ಕಂಚಿಪುರವೇಶ್ವರ ಜಯಸಿಂಗದೇವ ಅಲ್ಲದೆ ದಂಡನಾಯಕ ಗಂಗಯ್ಯ ಅಜೇಶವರ್ಮ ಕುರಿತು ತಿಳಿಸುತ್ತದೆ. [೧೩]

ಮೊಳಕಾಲ್ಮುರು ಶಾಸನ ೬ನೇ ವಿಕ್ರಮಾದಿತ್ಯನ ಕಿರಿಯ ಸೋದರ ತ್ರೈ ಲೋಕ್ಯಮಲ್ಲನು ನೊಳಂಬ,ಪಲ್ಲವ, ಪೆರ್ಮಾಡಿ ಜಯಸಿಂಗದೇವನು ನೊಳಂಬ ರಾಜಮಾತೆಯ ಪುತ್ರ ಎಂಬುದನ್ನು ತಿಳಿಸುತ್ತದೆ.

**ಸೇವುಣರು**

ಸೇವುಣರು ಈ ಪರಿಸರದಲ್ಲಿ ಆಳ್ವಿಕೆ ಮಾಡಿದ ಕುರುಹುಗಳಿವೆ.ಕಲ್ಲೇದೇವರಪುರದ ಕಲ್ಲೇಶ್ವರ ದೇವಾಲಯದಲ್ಲಿನ ಶಾಸನದಲ್ಲಿ ೧೨೭೯ ಕಲ್ಲೇದೇವರಪುರ ಸೈನ್ಯ ಸಮಯ ಸಂವರ್ಧನ,ಸಕಾಲ ಸಮಯ, ಸಮುದ್ಧರಣ, ಕ್ಷಿತಿಪತಿ ಮತ್ತು ಮಾತುಂಗ ,ಪೆಂಡಾರ, ಲಕ್ಷ್ಮೀದೇವ ತ್ರಿಕುಳಕಾರಂತ ಮೂಲನ ಪುಣಾರ್ಧವ ದಂಡ ಮುಂತಾದ ಆಕರ್ಷಕ ಹೆಸರುಗಳಿಂದ ಉಲ್ಲೇಖಿಸಿದೆ.

**ಹೊಯ್ಸಳರು**

ಹೊಯ್ಸಳರು ೧೧ನೇ ಶತಮಾನದಿಂದ ೧೪ನೇ ಶತಮಾನದವರೆಗೆ ಆಳ್ವಿಕೆ ಮಾಡಿದ್ದಾರೆ. ಗಂಜಿಗಟ್ಟೆ ಪಂಡರಬೆಟ್ಟದ ಜಿನ್ನೇಶ್ವರ ದೇವಾಲಯ ಶಾಸನ ೧೨೦೫ರಲ್ಲಿ ಇಮ್ಮಡಿ ಬಲ್ಲಾಳನ ಮಗ ನರಸಿಂಹನು ತನ್ನ ತಂದೆಗೆ ರಾಜ್ಯ ವಿಸ್ತರಣೆ ಕಾರ್ಯದಲ್ಲಿ ಸಹಕರಿಸಿದನೆಂದು ಪಲ್ಲವ ರಾಜವಂಶದ ಹೊನ್ನಕುಂದ ೨೦ ಮತ್ತು ಹೊಳಲ್ಕೆರ ನಾಡಿನಲ್ಲಿ ಆಡಳಿತ ನಡೆಸುತ್ತಿದ್ದನೆಂಬ ಉಲ್ಲೇಖವಿದೆ. ಅಶೋಕ ಸಿದ್ದಾಪುರದ ಜಾಲಿಹೊಲದ ವೀರಗಲ್ಲು ಹೊಯ್ಸಳರ ಸಾಮಾಜಿಕ ಪದ್ಧತಿಯನ್ನು ತಿಳಿಸುತ್ತದೆ.

ಕಲ್ಲೇದೇವರಪುರ ಕಲ್ಲೇಶ್ವರ ದೇವಾಲಯ ಶಾಸನ ಸೋಮೇಶ್ವರ ಪಟ್ಟಕ್ಕೆ ಬಂದ ವರ್ಷ ಗಂಗವಾಡಿ ೯೬೦೦೦, ನೊಳಂಬವಾಡಿ ೩೨೦೦೦, ನಾರಸಿಂಗಯ್ಯನಾಯಕ ಮತ್ತು ಮಲ್ಲಯ್ಯನಾಯಕರು ಬೊಮ್ಮತ್ತನೂರು(ಚಿತ್ರದುರ್ಗ) ಸೀಮೆಯನ್ನು ಆಳುತ್ತಿದ್ದು, ಬೆಮ್ಮತ್ತನೂರು ದುರ್ಗದ ಸ್ವಯಂಭೂಮಣಲೇಶ್ವರ ದೇವರಿಗೆ ದತ್ತಿ ಕೊಟ್ಟಿರುವುದನ್ನು ವಿವರಿಸುತ್ತದೆ."[೧೪]

**ವಿಜಯನಗರ**

ವಿಜಯನಗರ ಸಾಮ್ರಾಜ್ಯ ಈ ಪರಿಸರದ ಬಹುಭಾಗ ಆಳ್ವಿಕೆಗೆ ಒಳಪಟ್ಟಿತ್ತು. ಬೆಮ್ಮತ್ತಕಲ್ಲು ೧೩೪೪ ಶಾಸನದ ಪ್ರಕಾರ ಪ್ರತಿನಿಧಿಯಾಗಿ ಮಲ್ಲನಾಥ ಒಡೆಯ ಆಳ್ವಿಕೆ ಮಾಡಿದನು. ೧೩೫೯

ರಲ್ಲಿ ಅಳಿಯ ಸಾಯಿನಾಯಕನು ೧ನೇ ಬುಕ್ಕನ ಮಗನೆಂದು ಶಾಸನದಿಂದ ತಿಳಿದುಬರುತ್ತದೆ. ಈ ಕಾಲಾವಧಿಯಲ್ಲಿ ನಾಯಕನಹಟ್ಟಿ ಹಾಗೂ ಕುಮತಿಗಳು ಸೇನೆ ಬೀಡು ಬಿಡುವ ಕೇಂದ್ರಗಳಾಗಿ ಕಾರ್ಯನಿರ್ವಹಿಸಿವೆ.

ವಿಜಯನಗರ ಕಾಲದಲ್ಲಿ ಚಾವಡಿಗಳ ಆಡಳಿತ ಕಂಡುಬರುತ್ತದೆ.

೧. ಕೊಟ್ಟೂರು ಚಾವಡಿ(ದಾವಣಗೆರೆ,ಹರಿಹರ)

೨. ಯಕ್ಕಟ್ಟಿ ಚಾವಡಿ(ಹೊಳಲ್ಕೆರೆ)

೩. ರಾಯದುರ್ಗ ಚಾವಡಿ (ಆಂಧ್ರ ಪ್ರದೇಶ ಗಡಿ ಹಿರಿಯೂರು, ಚಳ್ಳಕೆರೆ, ಮೊಳಕಾಲ್ಮುರು)

ಅಗ್ರಹಾರ, ಮಹಾನಾಡುಗಳಿದ್ದವು ಎಂದು ಬರ್ಟನ್‌ಸ್ಟೈನ್ ಹೇಳುತ್ತಾರೆ.[೧೫] ತುಂಡುರಾಜ್ಯಗಳ ಒಕ್ಕೂಟ ಇತ್ತು.ಬುಕ್ಕರಾಯನ ಕಾಲದಲ್ಲಿ ನಾಯಕರ ಪದ್ದತಿ, ಅಮರನಾಯಕ ವ್ಯವಸ್ಥೆ, ರಾಯದುರ್ಗ ಸೀಮೆಯಲ್ಲಿ ಪ್ರಚಲಿತದಲ್ಲಿತ್ತು.

**ರಾಯದುರ್ಗ ಪಾಳೆಯಗಾರರು**

ಮೊಳಕಾಲ್ಮುರು ಚಳ್ಳಕೆರೆ ಮತ್ತು ಹಿರಿಯೂರು ತಾಲ್ಲೂಕುಗಳಲ್ಲಿ ದೊರತ ಶಾಸನಗಳ ಪ್ರಕಾರ ರಾಯದುರ್ಗ ಪಾಳೆಯಗಾರರು ಈ ಜಿಲ್ಲೆಯ ಪೂರ್ವದ ಕೆಲವು ಭಾಗಗಳನ್ನು ಆಳಿದ್ದಾರೆ. ಅವರ ಶಾಸನಗಳಲ್ಲಿ ವೀರಭೂಪತಿ ಒಡೆಯರ್, ಪಾಪಯ್ಯದೇವ, ತಿರುಮಲಯ್ಯದೇವ ಮತ್ತು ಹೊಟ್ಟೆಣನಾಯಕರ ಹೆಸರುಗಳು ಉಲ್ಲೇಖಗೊಂಡಿವೆ. ಜಟಂಗಿರಾಮೇಶ್ವರ ಬೆಟ್ಟದ ಮೇಲಿನ ಕ್ರಿ.ಶ ೧೩೮೭ರ ತಾಮ್ರ ಶಾಸನವೂ ವೀರಭೂಪತಿ ಒಡೆಯರ್‌ನನ್ನು ವಿವರಿಸುತ್ತಿದ್ದು, ಇವನು ಜಟಂಗಿ ರಾಮೇಶ್ವರ ದೇವರಿಗೆ ದಾನ ನೀಡಿದ್ದನ್ನು ಉಲ್ಲೇಖಿಸುತ್ತದೆ. ಈ ಪಾಳೆಯಗಾರ ವಂಶಸ್ಥರಿಗೆ ವಿಜಯನಗರದ ಅರಸ ಸದಾಶಿವರಾಯನು ರಾಯದುರ್ಗ ಸೀಮೆಯನ್ನು ಉಂಬಳಿಯಾಗಿ ನೀಡಿದ್ದನು. ಈ ಪಾಳೆಯಗಾರರು ಮಹಾಮಂಡಲೇಶ್ವರರೆಂತಲೂ, ಸೂರ್ಯವಂಶಕ್ಕೆ ಸೇರಿದವರೆಂದು ಕರೆದುಕೊಂಡಿದ್ದರು. ವಿಜಯನಗರ ಆಡಳಿತ ಪದ್ದತಿಯನ್ನೇ ಅನುಸರಿಸಿದ ಇವರು ದೇವಾಲಯ ಅಗ್ರಹಾರಗಳಿಗೆ ದಾನದತ್ತಿಯನ್ನು ನೀಡಿದ್ದಲ್ಲದೆ ರಾಜಕೀಯ ಆರ್ಥಿಕ ಧಾರ್ಮಿಕ ಕ್ಷೇತ್ರಗಳ ಅಭಿವೃದ್ಧಿಗೆ ಹೆಚ್ಚಿನ ಆಸ್ಥೆವಹಿಸಿರುವುದು ಶಾಸನಗಳಿಂದ ತಿಳಿಯುತ್ತದೆ.

**ಚಿತ್ರದುರ್ಗ ಪಾಳೆಯಗಾರರು**

೧೬ನೇ ಶತಮಾನದಿಂದ ೧೮ನೇ ಶತಮಾನಗಳವರಗೆ (೧೪೩೫-೧೭೭೯) ಅಂದರೆ ಸುಮಾರು೨೧೧ ವರ್ಷಗಳ ಕಾಲ ಆಳ್ವಿಕೆ ನಡೆಸಿದ ಇವರು ಇತಿಹಾಸರಂಗಕ್ಕೆ ಮಹತ್ವದ ಕೊಡುಗೆ ನೀಡಿದ್ದಾರೆ. ಈ ಪಾಳೆಪಟ್ಟಿನ ಮೂಲ ಪುರುಷ ಚಿತ್ರನಾಯಕ ನಂತರ ೧೪ ರಾಜರುಗಳು ಆಳ್ವಿಕೆ

ಮಾಡಿದ್ದಾರೆ. ಅವರಲ್ಲಿ ಐದನೇ ಮದಕರಿನಾಯಕ ಪ್ರಸಿದ್ಧಿವಾದ ದೊರೆ. ಪರಾಕ್ರಮಿಗಳಾದ ಚಿತ್ರದುರ್ಗದ ಪಾಳೆಯಗಾರರು ಪ್ರಜಾಹಿತ ಕಾರ್ಯಗಳಿಗೆ ಹೆಚ್ಚಿನ ಪ್ರೂತ್ಸಾಹ ನೀಡಿದರು. ಹಲವಾರು ದೇವಾಲಯ, ಅಗ್ರಹಾರ, ಕೋಟೆ–ಕೊತ್ತಲ, ಕೆರೆ–ಕುಂಟೆಗಳ ನಿರ್ಮಾಣಗಳಿಗೆ ಹೆಚ್ಚಿನ ಪ್ರೂತ್ಸಾಹ ನೀಡಿದರು. ನಾಯಕನಹಟ್ಟಿ ಪಾಳೆಯಗಾರರು ಮತ್ತು ರಾಯದುರ್ಗದ ಪಾಳೆಯಗಾರರು ರಕ್ತಸಂಬಂಧಿಗಳಾಗಿದ್ದರು. ಕಸ್ತೂರಿರಂಗಪ್ಪನಾಯಕ ಮೊಳಕಾಲ್ಮುರು ಕೋಟೆ ಕಟ್ಟಿಸಿದ ಬಗ್ಗೆ ದಾಖಲೆಗಳಿವೆ.

ಪಾಳೆಯಗಾರರಾದ ಹರತಿ, ಬೇಲೂರು, ಸಂತೆಬೆನ್ನೂರು, ಮತ್ತಿನಾಡು, ಪಾಳೆಯಗಾರರು ಈ ಪರಿಸರದಲ್ಲಿ ಆಳ್ವಿಕೆ ಮಾಡಿದ ಬಗ್ಗೆ ಚಾರಿತ್ರಿಕ ದಾಖಲೆಗಳಿವೆ. ಪಾಳೆಯಗಾರರ ನಂತರ ಮೈಸೂರು ಸಂಸ್ಥಾನಕ್ಕೆ ಸೇರಿತು. ನಂತರ ಬ್ರಿಟೀಷರ ಆಡಳಿತಕ್ಕೊಳಪಟ್ಟಿತು.

ಚಿನ್ನಹಗರಿ ನದಿ ಪರಿಸರದಲ್ಲಿ ಕ್ರಿ.ಪೂ.೨ನೇ ಶತಮಾನದಿಂದ ೧೮ನೇ ಶತಮಾನದವರೆಗೆ ಮೇಲ್ಕಂಡ ರಾಜಮನೆತನಗಳು ಆಳ್ವಿಕೆ ನಡೆಸಿ ಚರಿತ್ರೆಗೆ ತನ್ನದೆ ಆದ ಸಾಂಸ್ಕೃತಿಕ ಕೊಡುಗೆಗಳನ್ನು ನೀಡಿವೆ.

## ಅಡಿಟಿಪ್ಪಣಿಗಳು

೧. ವಿರೂಪಾಕ್ಷಿ ಪೂಜಾರಹಳ್ಳಿ: ಚಿನ್ನಹಗರಿಸಿರಿ, ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ ಪೂಜಾರಹಳ್ಳಿ-೨

೨. ಅದೇ-೨

೩. ಅದೇ-೨

೪. ಶಾಸನ ಸಂಪುಟ ಜಗಳೂರು ತಾಲ್ಲೂಕು ೨೩೯

೫. ಮೀರಾಸಾಬಿಹಳ್ಳಿ ಶಿವಣ್ಣ: ಮ್ಯಾಸಮಂಡಲ, ಪು ೫೨

೬. ವಿರೂಪಾಕ್ಷಿ ಪೂಜಾರಹಳ್ಳಿ:ಪೂರ್ವಕ್ತ, ಪು ೨

೭. ಅದೇ, ಪು ೨

೮. ಕರ್ನಾಟಕ ಪರಂಪರೆ ಭಾಗ ೧, ಪುಟ ೧೧೨

೯. ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ೨೯ ಮತ್ತು೨೭೯

೧೦. ಎ.ಕ.ಸಂ.೧೧ ಮೊಳಕಾಲ್ಮುರು ಶಾಸನ ಸಂಪುಟ ೪೦

೧೧. ಎ.ಕ.ಸಂ.೧೧ ಮೊಳಕಾಲ್ಮುರು ಶಾಸನ ಸಂಪುಟ ೧೨

೧೨. ಎ.ಕ.ಸಂ.೧೧ ಮೊಳಕಾಲ್ಮುರು ಶಾಸನ ಸಂಪುಟ ೧೦

೧೩. ಎ.ಕ.ಸಂ.೧೧ ಮೊಳಕಾಲ್ಮುರು ಶಾಸನ ಸಂಪುಟ ೧೦

೧೪. ದಾವಣಗೆರೆ ಶಾಸನಗಳು, ೨೫ ಜಗಳೂರು ಶಾಸನಗಳು ೨೩೧

೧೫. ಬಸವರಾಜಪ್ಪ:ಚಿತ್ರದುರ್ಗಭೂ ಹಿಡುವಳಿಗಳ ಅಧ್ಯಯನ, ಅಪ್ರಕಟಿತ ಪಿ.ಎಚ್.ಡಿ.ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ,ಹಂಪಿ. ಪು ೬

## ಅಧ್ಯಾಯ : ಮೂರು

# ಚಿನ್ನಹಗರಿ ನದಿ ಪರಿಸರದ ಪುರಾತತ್ವ ಮತ್ತು ಚಾರಿತ್ರಿಕ ನೆಲೆಗಳು

ಇತಿಹಾಸಕಾರರು ಮನುಷ್ಯನ ಜೀವನಕ್ರಮವನ್ನು ಅಧ್ಯಯನದ ಅನುಕೂಲಕ್ಕಾಗಿ ಪ್ರಾಗೈತಿಹಾಸಿಕ ಹಾಗೂ ಐತಿಹಾಸಿಕ ಎಂಬ ಭಿನ್ನ ಕಾಲಘಟ್ಟಗಳನ್ನಾಗಿ ವಿಂಗಡಿಸಿದ್ದಾರೆ. ಮನುಷ್ಯನು ಅಕ್ಷರ ಜ್ಞಾನವನ್ನು ಪಡೆದ ಕಾಲವನ್ನು ಐತಿಹಾಸಿಕ ಕಾಲಘಟ್ಟವೆಂದೂ, ಅದರ ಹಿಂದಿನಕಾಲ ಅಂದರೆ ಬರವಣಿಗೆ ಜ್ಞಾನವಿಲ್ಲದ ಕಾಲವನ್ನು ಪ್ರಾಗೈತಿಹಾಸಿಕ ಕಾಲಘಟ್ಟವೆಂದು ಕರೆಯಲಾಗಿದೆ. ಐತಿಹಾಸಿಕ ಕಾಲಘಟ್ಟದಲ್ಲಿ ಮನುಷ್ಯನು ಒಂದೆಡೆ ನೆಲೆ ನಿಂತರೆ ಪ್ರಾಗೈತಿಹಾಸಿಕ ಕಾಲಘಟ್ಟದಲ್ಲಿ ಅಲೆಮಾರಿ ಜೀವನವನ್ನು ನಡೆಸುತ್ತಿದ್ದನು. ಇವನು ಪ್ರಾಗೈತಿಹಾಸಿಕ ಕಾಲದಲ್ಲಿ ತನ್ನ ದಿನನಿತ್ಯದ ಬಳಕೆಗಾಗಿ ಶಿಲೆಗಳಿಂದ ಮಾಡಿದ ಆಯುಧಗಳನ್ನು ಬಳಸಿದ್ದರಿಂದ ಶಿಲಾಯುಗವೆಂದು ಕರೆಯಾಲಾಗಿದೆ.

"ಇತ್ತೀಚಿಗೆ ಆಫ್ರಿಕಾದಲ್ಲಿ ನಡೆದ ಪ್ರಾಚೀನ ಮಾನವನ ಶಾಸ್ತ್ರೀಯ ಸಂಶೋಧನೆಗಳ ಪ್ರಕಾರ ಮಾನವನ ಪ್ರಾಚೀನತೆಯೂ ಇಂದಿಗೆ ಸುಮಾರು  ೩.೫ ರಿಂದ ೪ ಮಿಲಿಯನ್ ವರ್ಷಗಳಷ್ಟು ಪೂರ್ವಕ್ಕೆ ಹೋಗುತ್ತದೆ'[೧]. "ಅತ್ಯಂತ ಪ್ರಾಚೀನ ಕಾಲದ ಮಾನವನನ್ನು ಹೊಮೊನಿಡರೆಂದು ಕರೆಯಾಲಾಗಿದ್ದು"[೨] ಇವರು "ಪ್ಲೀಸ್ಟೋಸೀನ್" ಯುಗದಲ್ಲಿ ಇಂದಿಗೆ ಸುಮಾರು ೪ ರಿಂದ ೭ ಮಿಲಿಯನ್ ವರ್ಷಗಳಷ್ಟು ಹಿಂದೆ ಆ ಪ್ರಕಾರದಲ್ಲಿದ್ದರೆಂದು ಐತಿಹಾಸಿಕ ದಾಖಲೆಗಳಿಂದ ತಿಳಿದುಬರುತ್ತದೆ.[೩] ಅಲ್ಲಿಂದ ಪ್ರಾಚೀನ ಮಾನವನು ಹಳೆಯ ಜಗತ್ತು ಹಾಗೂ ಆಗ್ನೇಯ ಏಷ್ಯಾಗಳಿಗೆ ಖಂಡಾಂತರ ಮಾರ್ಗಗಳ ಮೂಲಕ ತಲುಪಿ ನಂತರ ಭಾರತದ ಉಪಖಂಡವನ್ನು ಪ್ರವೇಶಿಸಿದನು.[೪]

ಶಿಲಾಯುಗದಲ್ಲಿ ಮನುಷ್ಯನು ಬೆಟ್ಟಗುಡ್ಡಗಳ ಗವಿ, ಕಲ್ಲಾಸರೆ, ಪೊಟರೆ, ಕಣಿವೆ, ಕಂದರಗಳಲ್ಲಿ, ನದಿ–ಸರೋವರ, ಹಳ್ಳ–ಕೊಳ್ಳಗಳಲ್ಲಿ ಅಲೆಮಾರಿಯಾಗಿ ಹಣ್ಣು–ಹಂಪಲು, ಪ್ರಾಣಿಗಳನ್ನು ಬೇಟೆಯಾಡಿ ಮಾಂಸವನ್ನು ತಿಂದು ಜೀವನ ಸಾಗಿಸುತ್ತಿದ್ದನು.[೫] ಈ ಶಿಲಾಯುಗವು ಅತ್ಯಂತ ದೀರ್ಘವಾಗಿದ್ದು ಅನುಕ್ರಮವಾಗಿ ಹಳೆಶಿಲಾಯುಗ, ಸೂಕ್ಷ್ಮ ಶಿಲಾಯುಗ, ನೂತನ ಶಿಲಾಯುಗ ಹಾಗೂ ಬೃಹತ್ ಶಿಲಾಯುಗಗಳೆಂದು ವರ್ಗೀಕರಿಸಲಾಗಿದೆ. ಈ ಶಿಲಾಯುಗಗಳ ಪ್ರತಿಯೊಂದು ಹಂತವನ್ನು ಮಾನವನು ತನ್ನ ಆಯುಧಗಳನ್ನು ತಯಾರಿಸಲು ಬಳಸಿದ ತಾಂತ್ರಿಕತೆ,  ಕಚ್ಚಾ ಶಿಲೆಯನ್ನು ಉಪಯೋಗಿಸಿಕೊಂಡು ತಯಾರಿಸಿದ ಆಯುಧಗಳ ಆಕೃತಿ ಅವುಗಳ ಗುಣ–ಲಕ್ಷಣಗಳಲ್ಲದೆ, ಅವನ ಅನಾಗರೀಕತೆಯಿಂದ ನಾಗರೀಕತೆಯತ್ತ ಸಾಗಿ ಬಂದ ಪ್ರಗತಿಯ ಪಥವನ್ನು ಆಧರಿಸಿ ನಿರ್ಧರಿಸಲಾಗಿದೆ. ಇವುಗಳು ಮಾನವ ಸಂಸ್ಕೃತಿಯ ಕ್ರಮಬದ್ಧ ಬೆಳವಣಿಗೆಯ ವಿವಿಧ ಕಾಲಘಟ್ಟಗಳಾಗಿವೆ.

ಜನಗಿಹಳ್ಳ ಅಥವಾ ಚಿನ್ನಹಗರಿ ನದಿಯ ಉಗಮದಿಂದ ಅಂತ್ಯದವರೆಗೂ ಎಡಬಲಗಳಲ್ಲಿ ಕೆಲವು ವಿಶಿಷ್ಟವಾದ ಇತಿಹಾಸ ಪೂರ್ವ ಐತಿಹಾಸಿಕ ನೆಲೆಗಳನ್ನು ಗುರುತಿಸಬಹುದು. ಈ ಪರಿಸರದಲ್ಲಿ ಬರುವ ಪ್ರಮುಖ ನೆಲೆಗಳೆಂದರೆ ಗಂಜಿಗಟ್ಟೆ, ಚಿಪ್ಪಿನಕೆರೆ, ಚಿಕ್ಕಗೊಂಡನಹಳ್ಳಿ, ತಮಟಕಲ್ಲು, ಸಂಗೇನಹಳ್ಳಿ, ಆಕನೂರು, ಕುಮತಿ, ಸಿದ್ದಯ್ಯನಕೋಟೆ, ಮಠದಜೋಗಿಹಳ್ಳಿ, ತುಪ್ಪದಕ್ಕನಹಳ್ಳಿ, ರಂಗಯ್ಯನದುರ್ಗ, ಹಾನಗಲ್, ನುಂಕೆಮಲೆ, ನಾಗಸಮುದ್ರ, ಅಶೋಕಸಿದ್ದಾಪುರ, ಜಟಂಗಿರಾಮೇಶ್ವರ ಮುಂತಾದವುಗಳು ಕಂಡುಬರುತ್ತವೆ.

**ಗಂಜಿಗಟ್ಟೆ**

ಗಂಜಿಗಟ್ಟೆ ಗ್ರಾಮವು ಚಿತ್ರದುರ್ಗ ಜಿಲ್ಲೆಯ ಹೊಳಲ್ಕೆರೆ ತಾಲ್ಲೂಕಿನಲ್ಲಿದೆ. "ಅನ್ನ ಬಸಿದ ಗಂಜಿ ಒಂದು ಊರಿನಲ್ಲಿ ನಿಂತಿತಂತೆ"[೬] ಅದಕ್ಕೆ ಗಂಜಿಕಟ್ಟೆ ಎನ್ನುವ ಹೆಸರು ಬಂತು ಎಂದು ಹಿರಿಯ ವ್ಯಕ್ತಿಗಳು ಹೇಳುತ್ತಾರೆ.

ಗಂಜಿಗಟ್ಟೆಯ ಮೂಡಣ ದಿಕ್ಕಿನಲ್ಲಿ ಮಿಂಚೇರಿ ಎಂಬ ಅರಣ್ಯವಿದೆ. ತುಂಬಾ ಮನೋಹರವಾದ ಸ್ಥಳ ನಿರ್ಜನವಾದ ಪ್ರದೇಶ, ಮಳೆಗಾಲದಲ್ಲಿ ಜುಳು ಜುಳು ನೀರಿನ ನಿನಾದ, ಎಳೆ ಬಿಸಿಗೆ ಮಿರಿಮಿರಿ ಮಿಂಚುವ ಅರಣ್ಯ, ಅರಣ್ಯದೊಳಗೆ ಮೇವು, ನೀರು ಹುಲುಸಾಗಿದೆ. ಇಂದಿಗೂ ಮಾನವನ ಸಾಕು ಪ್ರಾಣಿಗಳಾದ ದನ, ಕುರಿ, ಆಡು ಸಕಲ ಜೀವರಾಶಿಗೂ ರಕ್ಷಣೆ ನೀಡುವ ಪ್ರದೇಶ. ಬೇಸಿಗೆ ಕಾಲದಲ್ಲಿ ದನಕರುಗಳು, ಕುರಿ ಆಡುಗಳೊಂದಿಗೆ ಅನೇಕ ಪ್ರದೇಶಗಳಿಂದ ವಲಸೆ ಬರುವುದನ್ನು ಕಾಣುತ್ತೇವೆ. ಈ ಪ್ರದೇಶದ ಸುತ್ತಮುತ್ತಲಿನ ಜನಗಳಿಗೆ ಬರ ಎನ್ನುವ ಶಬ್ದವೇ ಇಲ್ಲ.

ಬೇಡ ಬುಡಕಟ್ಟಿನ ಸಾಂಸ್ಕೃತಿಕ ವೀರ ಗಾದ್ರಿಪಾಲನಾಯಕನ ನೆಲೆ ಇರುವುದು ಇಲ್ಲಿಯೇ. ಈ ಗಂಜಿಗಟ್ಟೆ ನೆಲೆಯು ಬೃಹತ್ ಶಿಲಾಯುಗದ ನಿವೇಶನಗಳನ್ನು ಹೊಂದಿದೆ. ಮೋರಿ ಹಾಗೂ ಶಿಲಾವೃತ್ತಗಳು ಈ ನಿವೇಶನದಲ್ಲಿಯೂ ಕಂಡುಬಂದಿವೆ.

**ಚಿಪ್ಪಿನಕೆರೆ**

ಚಿತ್ರದುರ್ಗ ತಾಲ್ಲೂಕಿನ ವ್ಯಾಪ್ತಿಗೆ ಸೇರಿದ ಚಿಪ್ಪಿನಕೆರೆ ಶಾತವಾಹನರ ಸಮಕಾಲೀನ ಸಂಸ್ಕೃತಿಯ ಇನ್ನೊಂದು ನಿವೇಶನವಾಗಿ ಗುರುತಿಸಲ್ಪಡುತ್ತದೆ. ಈ ನಿವೇಶನ ಕಂಡುಬರುವುದು ಜನಗಿಹಳ್ಳ ಮತ್ತು ಕೋಡಿಹಳ್ಳಗಳು ಸಂಗಮಿಸುವ ಪರಿಸರದಲ್ಲಿ. ಇದನ್ನು ಸ್ಥಳೀಯರು ಗುರುತಿಸುವುದು "ಪಾಂಡವರ ಬೀಳು ಹಾಗೂ ಬೂದಿಮಣ್ಣಿನ ಹೊಲಗಳೆಂದು".[೭] ಚಂದ್ರವಳ್ಳಿ ಚರಿತ್ರಾರಂಭ ಕಾಲದ ಕುರುಹುಗಳುಳ್ಳ ತಮಟಕಲ್ಲು ಹಾಗೂ ಚಿಕ್ಕಗೊಂಡನಹಳ್ಳಿ ಸಾಲಿನಲ್ಲಿ ಚಿಪ್ಪಿನಕೆರೆ ನಿವೇಶನ ನೆಲೆಗೊಂಡಿರುವುದು ಗಮನಾರ್ಹ. ಇದು ಬೃಹತ್ ಶಿಲಾಯುಗದ ನೆಲೆಯಾಗಿಯೂ ಇದ್ದುದನ್ನು

ಇಲ್ಲಿ ದೊರೆತ ಕೆಲವು ಅವಶೇಷಗಳು ಸಮರ್ಥಿಸುತ್ತವೆ. ಬಿಳಿ ವರ್ಣದ ರೇಖೆಗಳ ಸಹಿತವಾದ ಹಾಗೂ ಹೊಳಪುಳ್ಳ ಕಪ್ಪು, ಕೆಂಪು ಮತ್ತು ಬೂದುಬಣ್ಣದ ಮಡಿಕೆಯ ಚೂರುಗಳು ವಿವಿಧ ಬಗೆಯ ಮಣಿಗಳು ದಂತದ ಬಳೆ ಚೂರುಗಳು, ಮಡಿಕೆ ಬಿಲ್ಲೆಗಳು, ಸುಟ್ಟ ಇಟ್ಟಿಗೆಗಳು ಇತ್ಯಾದಿ ವಸ್ತುಗಳು ಚಿತ್ರದುರ್ಗ ಸಂಶೋಧನ ತಂಡಕ್ಕೆ ಇಲ್ಲಿ ದೊರೆತವು. ಚಂದ್ರವಳ್ಳಿಯಲ್ಲಿ ದೊರೆತ ಇಟ್ಟಿಗೆ, ಮಡಿಕೆ, ಕುಡಿಕೆ, ಮಣಿ ಇತ್ಯಾದಿಯನ್ನು ಹೋಲುತ್ತವೆ. ಈ ವಸ್ತುಗಳು ಮುಖ್ಯವಾಗಿ ಶಾತವಾಹನ ಕಾಲದ ಸೀಸದ ನಾಣ್ಯವೊಂದು ಇಲ್ಲಿ ದೊರಕಿರುವುದರಿಂದಾಗಿ ಇದಕ್ಕೆ ಇನ್ನಷ್ಟು ಮಹತ್ವ ಪ್ರಾಪ್ತವಾಗಿದೆ, ಒಂದು ಮುಖದಲ್ಲಿ ಇಣಿಯುಳ್ಳ ನಂದಿಯ ಉಬ್ಬು ಚಿತ್ರವಿದ್ದು, ಅದರ ಸುತ್ತಲೂ ಬ್ರಾಹ್ಮಿ ಅಕ್ಷರದಲ್ಲಿ ರಾಜನ ಹೆಸರನ್ನು ಮೂಡಿಸಿದೆ. ಇದು ಚಂದ್ರವಳ್ಳಿಯಲ್ಲಿದ್ದ ಮಹಾರಥಿಗಳಿಗೆ ಸಂಬಂಧಿಸಿದ ನಾಣ್ಯವೆಂಬುದನ್ನು ಸ್ಪಷ್ಟಪಡಿಸುತ್ತದೆ.

**ಚಿಕ್ಕಗೊಂಡನಹಳ್ಳಿ**

ಈ ಗ್ರಾಮವು ಚಿತ್ರದುರ್ಗ ತಾಲ್ಲೂಕಿನಲ್ಲಿದೆ. ಹಿಂದೆ ಕೋಟೆ ಕೊತ್ತಲಗಳಿದ್ದ ಊರು. ಈಗ ಕಲ್ಲಿನ ಬಾಗಿಲು ಮಾತ್ರ ಅವಶೇಷವಾಗಿ ಉಳಿದಿದೆ. ಚಿಕ್ಕಗೌಡನೊಬ್ಬನ ಹೆಸರಿನಲ್ಲಿ ಈ ಹೆಸರು ಬಂದಿರಬೇಕು. ಈ ನೆಲೆಯಲ್ಲಿಯೂ ಶಾತವಾಹನರ ಕಾಲದ ಕುರುಹುಗಳನ್ನು ಕಾಣಬಹುದು.

**ತಮಟಕಲ್ಲು**

ತಮಟಕಲ್ಲು ಚಿತ್ರದುರ್ಗಕ್ಕೆ ಐದು ಕಿಲೋ ಮೀಟರ್ ದೂರದಲ್ಲಿ ಬೆಟ್ಟಕ್ಕೆ ಹೊಂದಿಕೊಂಡಂತೆ ಪುರಾತನ ಕಾಲದ ಆಂಜನೇಯ ದೇವಾಲಯವಿದೆ. ಇಲ್ಲಿ ಅನೇಕ ಶಿಲಾ ಶಾಸನಗಳು ದೊರೆತಿವೆ. ದೊರೆತ ಒಂದು ಕಲ್ಲಿನ ಮೇಲೆ ಕನ್ನಡ ಅಕ್ಷರಗಳನ್ನು ಬಳಸಿ ಪದ್ಯದ ಸಾಲುಗಳನ್ನು ಕೆತ್ತಲಾಗಿದೆ. ಇದು ಪ್ರಥಮ ಶಾಸನವಾಗಿರಬೇಕೆಂದು ಇತಿಹಾಸಕಾರರ ಅಭಿಪ್ರಾಯವಾಗಿದೆ. ಇವು ಕ್ರಿ.ಶ.೫೦೦ರಲ್ಲಿ ಬರೆದ ಶಾಸನಗಳೆಂದು ಇತಿಹಾಸಕಾರರು ಅಭಿಪ್ರಾಯ ಪಟ್ಟಿದ್ದಾರೆ. ಶಾಸನದಲ್ಲಿ ಮಾಸಿಕಾಪುರದ ಅಧಿಪತಿಯಾದ ಧನಾಗಮ, ಇವನ ಮಗ ವಿನಾಗಮ, ಇವನ ಮಗ ಗುಣಮಧುರನೆಂಬ ಬ್ರಾಹ್ಮಣನ ಗುಣಗಳನ್ನು ಹೊಗಳಲಾಗಿದೆ".[೮] ಇನ್ನೊಂದು ಕನ್ನಡ ಶಾಸನದಲ್ಲಿ ಗುಣಮಧುರನು ಯುದ್ಧದಲ್ಲಿ ಸತ್ತನಂತರ ಅವನನ್ನು ಪ್ರಶಂಸಿಸಿ ಬರೆಯಲಾಗಿದೆ. ಈ ಪ್ರದೇಶವೇ ಮಾಸಿಕಾಪುರವಾಗಿರಬಹುದೆಂದು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ.

ಈ ಊರಿನ ಪಶ್ಚಿಮದಲ್ಲಿ ಸೂರಜ್ಜಿ ಹೊಂಡವಿದೆ. ಇದೊಂದು ಸತಿಕಲ್ಲು ಈ ಕಲ್ಲಿನಲ್ಲಿ ಸೂರಜ್ಜಿ ಹಾಗೂ ಗಂಡು ಮಗುವಿನ ವಿಗ್ರಹವಿದೆ. ಈಕೆ ಸತ್ತ ಸ್ಥಳದಲ್ಲಿ ಅಗೆದರೆ ಈಗಲೂ ಗಂಧದ ಚೂರುಗಳು ಸಿಗುತ್ತವೆಯೆಂದು ಸ್ಥಳೀಯರಿಂದ ತಿಳಿದುಬರುತ್ತದೆ.

ಊರಿಗೆ ಈ ಹೆಸರು ಬರಲು ಕಾರಣವೇನೆಂದರೆ ಹಿಂದೆ ಶತೃಗಳು ಬಂದರೆ ಊರ ಬೆಟ್ಟದ ಕಾವಲಿನವರು ತಮಟೆ ಬಾರಿಸುತ್ತಿದ್ದರೆಂತೆ ಆ ಧ್ವನಿ ಚಿತ್ರದುರ್ಗದ ಬಸವನ ಬುರುಜಿಗೆ ಕೇಳಿಸುತ್ತಿತಂತೆ, ಆಗ ದುರ್ಗದವರು ಎಚ್ಚೆತ್ತುಕೊಳ್ಳುತ್ತಿದ್ದರು. ಆದ್ದರಿಂದ ಊರಿಗೆ ತಮಟೆಗಲ್ಲು –ತಮಟಗಲ್ಲು ಎಂದು ಹೆಸರಾಯಿತಂತೆ.[೯] ಈ ನೆಲೆಯು ಬೃಹತ್ ಶಿಲಾಯುಗ ವಾಸ್ತವ್ಯದ ನೆಲೆಯಾಗಿದೆ. ಇತಿಹಾಸ ಆರಂಭ ಕಾಲದಲ್ಲಿ ಚಿತ್ರಿತ ಮಡಿಕೆ ಭಾಗಗಳು, ಎಲುಬಿನ ಚೂರುಗಳು ಕಂಡು ಬಂದಿವೆ.

**ಸಂಗೇನಹಳ್ಳಿ**

ಚಿತ್ರದುರ್ಗ ತಾಲ್ಲೂಕಿನ ಸಂಗೇನಹಳ್ಳಿ ಕೆರೆಯ ಮಧ್ಯೆ ವಸತಿ ನೆಲೆ ಇದ್ದು ನೂತನ ಶಿಲಾಯುಗದ ಬೂದಿ ಬಣ್ಣದ ಮಡಿಕೆ, ಶಿಲಾಕೊಡಲಿ, ಬೂದಿದಿಬ್ಬ ಮತ್ತು ಬಯಲು ಬಂಡೆ ರೇಖಾ ಚಿತ್ರಗಳು ದೊರೆತಿವೆ. ನಂತರ ಇತಿಹಾಸ ಆರಂಭದ ಕಾಲದ 'ಆಂಧ್ರ ಸಂಸ್ಕ್ರತಿ' ಎಂದು ಕರೆಯಲಾಗಿರುವ ಶಾತವಾಹನರ ಕಾಲಕ್ಕೆ ಸೇರಿದ ಕೆಂಪು, ಕಪ್ಪು ಕೆಂಪು ಲೇಪನದಡಿ ಬಿಳಿ ವರ್ಣದ ಚಿತ್ರಿತ ಮಡಿಕೆಗಳು ದೊರತಿವೆ.

ಮೈಸೂರು ಅರಸರ ಕಾಲದಲ್ಲಿ ಅಂದಿನ ಮಂತ್ರಿಗಳಾದ ಜಗಳೂರಿನ ಇಮಾಮ್ ಸಾಹೇಬರ ಪರಿಶ್ರಮದಿಂದ ಜನಗಿಹಳ್ಳಕ್ಕೆ ಸಂಗೇನಹಳ್ಳಿ ಬಳಿ ಕೆರೆ ನಿರ್ಮಿಸಲಾಯಿತು. ಇದರಿಂದ ಸುಮಾರು ಮೂರು ಸಾವಿರ ಎಕರೆ ಜಮೀನಿಗೆ ನೀರು ದೊರೆಯುವಂತಾಗಿ ಸಂಗೇನಹಳ್ಳಿ ಕೆರೆ ಎಂದೇ ಪ್ರಸಿದ್ದವಾಗಿದೆ. ಕೆರೆಯ ಅಂಗಳ ಮಧ್ಯೆ ವಸತಿನೆಲೆಗಳು, ಪ್ರಾಚ್ಯ ಅವಶೇಷಗಳು ಕಂಡು ಬಂದಿವೆ. ಇದೊಂದು ಬೇಚಾರಕ್ ಗ್ರಾಮವಾಗಿದೆ.

**ಆಕನೂರು**

ಆಕನೂರು ಜಗಳೂರು ತಾಲ್ಲೂಕಿನ ದೊಣಿಹಳ್ಳಿಯ ಹತ್ತಿರವಿರುವ ಚಿಕ್ಕ ಗ್ರಾಮ. ಈ ಗ್ರಾಮಕ್ಕೆ ಅಂಟಿಕೊಂಡಂತೆ ದಕ್ಷಿಣ ದಿಕ್ಕಿಗೆ ಇರುವ ಹೊಲಗಳಲ್ಲಿ ಆದಿ ಇತಿಹಾಸ ಕಾಲಕ್ಕೆ ಸೇರಿದ "ವಿವಿಧ ಮಡಿಕೆಗಳು, ಮಣಿಗಳು, ಎಲುಬಿನ ಅವಶೇಷಗಳು, ಇಟ್ಟಿಗೆಯ ಚೂರುಗಳು ದೊರೆತಿವೆ. ಇವುಗಳ ಜೊತೆಗೆ ಹೊಯ್ಸಳ ಮತ್ತು ಪಾಳೆಯಗಾರರ ಕಾಲಕ್ಕೆ ಸಂಬಂಧಿಸಿದ ವೀರಗಲ್ಲು, ಭೈರವ ಮತ್ತಿತರ ಶಿಲ್ಪಾವಶೇಷಗಳು ಕಂಡುಬಂದಿವೆ".[೧೦.]

ಈ ಅವಶೇಷಗಳು ದೊರೆತ ಸ್ಥಳವು ಚಿತ್ರದುರ್ಗದ ಕಡೆಯಿಂದ ಜನಗಿಹಳ್ಳ ಮತ್ತು ಜಮಾಪುರದ ಕಡೆಯಿಂದ ಹರಿದು ಜನಗಿಹಳ್ಳಕ್ಕೆ ಸೇರುವ ಕಣಗಳಹಳ್ಳ ಅಥವಾ ಹುಲಿಗನ ಹಳ್ಳಗಳ ಸಂಗಮಸ್ಥಾನದಲ್ಲಿದೆ. ಕಣಗಳಹಳ್ಳದ ಎಡದಂಡೆಯ ಸಮಾಧಿ ನೆಲೆಯ ಲಕ್ಷಣಗಳು ಕಾಣಬರುತ್ತವೆ.

ಜನಗಿಹಳ್ಳದ ದಂಡೆಗಳ ಮೇಲೆ ನೆಲೆಗೊಂಡಿರುವ ನೆಲೆಯು ಮಣ್ಣುಕೂಡಿರುವುದರಿಂದ ಸ್ಥಳೀಯರ ಬೂದು ಗಡ್ಡೆಯೆಂದು ಕರೆಯುವರು. ಪಾಳೆಯಗಾರರ ಕಾಲಕ್ಕೆ ಈ ಪ್ರದೇಶವನ್ನು ಕಗ್ಗಲ್ಲನಾಯಕನು ನೋಡಿಕೊಳ್ಳುತ್ತಿದ್ದನು. ಆ ಕಾಲದ ಈ ನೆಲೆಯಲ್ಲಿ ದರೋಡೆ ಪಟ್ಟಣವೆಂತಲೂ ಕರೆಯುತ್ತಿದ್ದರು.[೧೧] ಈಗಲೂ ಅದೇ ಹೆಸರಿನಿಂದಲೇ ಕರೆಯುತ್ತಾರೆ.

ಸುಮಾರು ಹದಿನೈದು ಇಪ್ಪತ್ತು ಎಕರೆಗಳಷ್ಟು ವಿಸ್ತಾರವಾದ ಈ ಬಯಲಿನಲ್ಲಿ ಕಂಡುಬಂದಿರುವ ಅವಶೇಷಗಳೆಂದರೆ :

೧. ಕಪ್ಪು ಮತ್ತು ಕೆಂಪು ಬಣ್ಣದ ಮಡಿಕೆಗಳು.

೨. ಕಪ್ಪು ಮಡಿಕೆಗಳು.

೩. ಕೆಂಪು ಮಡಿಕೆಗಳು.

೪. ಬಿಳಿ ವರ್ಣದ ರೇಖಾ ಚಿತ್ರಗಳನ್ನೊಳಗೊಂಡ ಮಡಿಕೆಗಳು.

೫. ಕುಂಭಗಳ ಮೇಲೆ ಮುಚ್ಚುತ್ತಿದ್ದ ಮುಚ್ಚುಳಗಳು.

೬. ರಂಧ್ರವಿರುವ ಹೂಜಿಯ ಮತ್ತು ಜಾಡಿಯ ಚೂರುಗಳು.

೭. ಇಟ್ಟಿಗೆ ಕಬ್ಬಿಣದ ಕಿಟ್ಟ ಹಾಗೂ ಮೂಳೆಗಳು.

೮. ಬಳಪದ ಕಲ್ಲಿನಲ್ಲಿ ಕೆತ್ತಿರುವ ಚಿಕ್ಕ ಚಿಕ್ಕ ಬಿಡಿ ಶಿಲ್ಪಗಳು.

೯. ವೀರಗಲ್ಲು ನಿಲುವುಗಲ್ಲು, ಭೈರವ ಶಿಲ್ಪಗಳು, ನಂದಿ ಲಿಂಗ, ಗಣೇಶ ಮತ್ತು ಕಟ್ಟಡ ಇವೇ ಮುಂತಾದ ಅವಶೇಷಗಳನ್ನು ಕಾಣಬಹುದು. ಇವುಗಳಲ್ಲದೆ ಈ ನೆಲೆಯಲ್ಲಿ ಸೀಸದ ಹಾಗೂ ಚಿನ್ನದ ನಾಣ್ಯಗಳು ಕಂಡು ಬಂದಿದ್ದವೆಂದು ಕೃಷಿಕರು ಹೇಳುತ್ತಾರೆ.

**ಚಿಕ್ಕಮಲ್ಲನಹೊಳೆ**

ದಾವಣಗೆರೆ ಜಿಲ್ಲೆಯ ಜಗಳೂರು ತಾಲ್ಲೂಕಿನ ಚಿಕ್ಕಮಲ್ಲನಹೊಳೆ ನವಶಿಲಾಯುಗದ ನಿವೇಶನವಾಗಿದೆ. ವಸತಿದಿಬ್ಬ ಅಥವಾ ಬೂದಿದಿಬ್ಬ ಇದನ್ನು ಅಲ್ಲಿನ ಸ್ಥಳೀಯರು 'ಮುತ್ತಿಗಾರರ ಬೊಟ್ಟು' 'ದೇವರೆತ್ತಿನ ಬೊಟ್ಟು' ಎಂದು ಕರೆಯುವರು.[೧೨] ಇದು ನಾಯಕ ಜನಾಂಗದ ಕಾಟಯ್ಯನವರ ನಿಜಲಿಂಗಪ್ಪನ ಹೊಲದಲ್ಲಿದೆ. ಸುಮಾರು ನಾಲ್ಕು ಎಕರೆ ವಿಸ್ತೀರ್ಣ ಹೊಂದಿದ್ದು ನಾಲ್ಕು ಅಡಿ ಎತ್ತರ ೯೫ ಅಡಿ ಉದ್ದ ಮತ್ತು ೧೦೫ ಅಡಿ ಉತ್ತರ ದಕ್ಷಿಣವಾಗಿ ಅಗಲವನ್ನು ಹೊಂದಿದೆ. ಇಲ್ಲಿ ಸುಮಾರು ಐದು ಸ್ತರಗಳಲ್ಲಿ ಬೂದಿಮಿಶ್ರಿತ ಮಣ್ಣು ಮತ್ತು ಹೆಚ್ಚಾಗಿ ಸಗಣಿ ಕಂಡುಬರುತ್ತದೆ. ಉಳಿದ ೩.೪ ಸ್ತರದಲ್ಲಿ ಪಶುಗಳ ಮೂಳೆಗಳು ಹೇರಳವಾಗಿ ದೊರಕಿವೆ. ಕೆಂಪು ಮತ್ತು ಬೂದು

ಬಣ್ಣದ ಮಡಿಕೆ ಚೂರುಗಳು ಕಲ್ಲಿನ ಕೊಡಲಿ ಮೊನಚಾದ ಕಲ್ಲುಗಳಲ್ಲದೆ ಇಲ್ಲಿ ಇನ್ನಿತರ ಶಿಲಾಯುಧಗಳನ್ನು ನೋಡಬಹುದು.

ಸ್ಥಳೀಯರು ಈ ಬೂದಿದಿಬ್ಬದ ಮಣ್ಣನ್ನು ಮನೆಗಳ ಮೇಲೆ ಹಾಕಲು ಮತ್ತು ಫಲವತ್ತತೆಗಾಗಿ ಹೊಲಗಳಿಗೆ ಎತ್ತಿನ ಗಾಡಿಗಳ ಮೂಲಕ ಏರಿಕೊಂಡು ಹೋಗುತ್ತಿದ್ದುದರಿಂದ ಸುಲಭವಾಗಿ ಮೇಲಿನಿಂದ ತಳಭಾಗದವರೆಗೆ ಸ್ತರಗಳನ್ನು ಗುರುತಿಸಲು ಅವಶೇಷಗಳನ್ನು ಪತ್ತೆಹಚ್ಚಲು ಸಹಾಯಕವಾಗಿದೆ. ಯಾತ್ರಿಕರು ರೊಪ್ಪದಬಟ್ಟು, ಮುತ್ತಿಗಾರ ದೇವರತ್ತುಗಳು ಐಕ್ಯಗೊಂಡ ಸ್ಥಳವೆಂದು ಹಣೆಗಿಟ್ಟುಕೊಳ್ಳುವುದರ ಜೊತೆಗೆ ಗರ್ಭಿಣಿ ಸ್ತ್ರೀಯರು ಬಾಯಿಚಪಲಕ್ಕಾಗಿ ಚೂರ್ಣದಂತೆ ತಿನ್ನುವರು. ಮುತ್ತಿಗಾರರ ಎತ್ತುಗಳೇ ಅರಾಧ್ಯ ದೈವಶಕ್ತಿ. ಇಲ್ಲಿ ಮೂಳೆಗಳು ಸಾಕಷ್ಟು ಪ್ರಮಾಣದಲ್ಲಿ ದೊರೆತಿರುವುದರಿಂದ ಇದು ಸ್ಮಶಾನ ನಿವೇಶನವೆಂದು ಕರೆಯುವುದು ಚರ್ಚಾವಿಷಯ. ಈ ಬೂದಿ ದಿಬ್ಬಗಳಿಗೆ ನೂತನ ಶಿಲಾಯುಗದ ಪಶುಸಂಗೋಪನೆಯೇ ಕಾರಣವೆಂದು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಇದು ಆ ವಾದಕ್ಕೆ ಹೊರತಾಗಿಲ್ಲ "ಬೇಟೆಯಿಂದ ಅಲ್ಪವಾಗಿ ಒಂದು ಬುಡಕಟ್ಟು ವರ್ಗ ಸ್ಥಿತ್ಯಂತರಗೊಂಡು ಈ ರೀತಿ ನದಿ ಮುಖಜ ಭೂಮಿಯಿಂದ ಅಭಿಮುಖವಾಗಿ ಅಂದರೆ ಆಂಧ್ರಪ್ರದೇಶದಿಂದ ವಲಸೆ ಬಂದರೆಂಬ ವಿಷಯ ತಿಳಿಯುತ್ತದೆ."[೧೨] ಮಳೆಭೂಸಮುದ್ರ ಬೇಚಾರಕ್ ಗ್ರಾಮವಾಗಿದೆ. ಕಲ್ಲಹಳ್ಳಿ ಮತ್ತು ಚಿಕ್ಕಮಲ್ಲನಹೊಳೆ ಮಧ್ಯ ಈ ನದಿ ದಂಡೆಯ ಮೇಲೆ ಪ್ರಾಚೀನ ಕಾಲದ ಮಳೆಭೂಸಮುದ್ರ ಎಂಬ ಇಂದು ನಶಿಸಿಹೋಗಿದೆ. ಈ ಮಳೆಭೂಸಮುದ್ರದಲ್ಲಿ ಈ ಹಿಂದೆ ನಾಯಕ ಸಮುದಾಯದ ಗುಂಡೇತಲಾರು ಬೆಡಗಿನವರು ನೆಲೆಸಿದ್ದು ಕ್ರಮೇಣ ಇಲ್ಲಿಂದ ಬೇರೆ ಕಡೆ ವಲಸೆ ಹೋದರು. ಉಜ್ಜಯಿನಿಮಠ ಮತ್ತು ಆ ಗ್ರಾಮಕ್ಕೆ ಸಂಬಂಧಿಸಿದಂತೆ ಈ ಮಳೆ ಭೂಸಮುದ್ರ ತೀರ ಹತ್ತಿರವಾಗಿದೆ.

**ಕರೆಪೂಜಾರಹಳ್ಳಿ.**

ಪೂಜಾರಹಳ್ಳಿ ಗ್ರಾಮ ಪಂಚಾಯ್ತಿ ವ್ಯಾಪ್ತಿಗೆ ಬರುತ್ತದೆ. ಇಂದು ಹಾಳೂರಾಗಿದೆ. ಈ ನಿವೇಶನದ ಅಕ್ಕಪಕ್ಕದಲ್ಲಿ ರಕ್ಕರಾಯಿ ನೇಬಂಡೆ, ಕತ್ತೆ ಮೊರಡೆ ಮತ್ತು ಕೊಟದ ಗುಡ್ಡದ ಮಾರಮ್ಮನ ನೆಲೆಗಳು ಅಡವಿಯಲ್ಲಿದ್ದು, ಈ ನಿರ್ವೇಶನಕ್ಕೆ ಸಮೀಪದಲ್ಲಿವೆ. ಇಲ್ಲಿರುವ ಸರ್ವೆ ನಂ. ೧೪ ಮತ್ತು ೧೬ ರಲ್ಲಿ ಈ ಪ್ರಾಚೀನ ನಿವೇಶನವಿದೆ. ತೋಟದಪೆದ್ದಓಬಯ್ಯ, ತೋಟದ ಬೋರಯ್ಯನ ಅಣ್ಣತಮ್ಮಂದಿರ ಹೊಲದಲ್ಲಿದೆ. ಈ ಹಾಳೂರು ಕೋಟೆ, ಕಂದಕ, ಬುರುಜು ಇತರ ಭಗ್ನಾವಶೇಷಗಳು ಪ್ರಾಚೀನತೆಯನ್ನು ಸಾಕ್ಷೀಕರಿಸುತ್ತವೆ. ಮನೆ, ಬಾವಿ, ಬೀದಿ ಇತರ ಲಕ್ಷಣಗಳಿವೆ. ಕೋಟೆ ಪಕ್ಕದಲ್ಲಿ ಕ್ರಿ.ಶ.೧೯೫೪ರ ಪೂರ್ವದಲ್ಲಿ ಇದು ಅರಣ್ಯ ಇಲಾಖೆಗೆ ಸೇರಿದರೂ ಗ್ರಾಮದ ನಿವೇಶನ (ಅನಾಧೀನ, ಶಿವ ಜಮೀನು)ವೆಂದೇ ಕರೆಯುತ್ತಿದ್ದರು. ಅನಂತರ ಈ ಜಮೀನನ್ನು ತೋಟದಪೆದ್ದಓಬಯ್ಯ

ಬೋರಯ್ಯ ಅಣ್ಣ ತಮ್ಮಂದಿರಿಗೆ ಸರ್ಕಾರ ಪಟ್ಟ ನೀಡಿತು. ಕೋಟೆ ಅವಶೇಷಗಳಿರುವ ನಿವೇಶನವನ್ನು ಹೊರತುಪಡಿಸಿ ಉಳಿದ ಎಲ್ಲಾ ಪ್ರದೇಶವನ್ನು ಉಳುಮೆ ಮಾಡುತ್ತಾರೆ.

ಕ್ರಿ.ಶ.೧೫೫೦–೧೬೦೦ರ ಸುಮಾರಿಗೆ “ನಾಯಕ ಜನಾಂಗದ ಜಗದ್ಗುರು ಪಶುಪಾಲಕ ಸಮುದಾಯಕ್ಕೆ ದೊರೆಯಾಗಿದ್ದ‘ಯರಮಂಚನಾಯಕ’ ತನ್ನ ಕಾಪು ಕಂಪಳದೊಡನೆ ಇಲ್ಲಿ ವಾಸ್ತವ್ಯ ಹೂಡಿದ್ದನೆಂದು ತಿಳಿದುಬರುತ್ತದೆ”.[೧೪] ಗುಡೇಕೋಟೆ, ಜರಿಮಲೆ ಪಾಳೆಯಗಾರರ ಆಳ್ವಿಕೆಯ ಕಾಲಕ್ಕೆ ಈ ಪ್ರದೇಶ ಅವರಿಗೆ ಒಳಪಟ್ಟಿದ್ದಿತು. ಹಂಪೆ,ಆನೆಗೊಂದಿ, ಗೆದ್ದಲಗಟ್ಟೆ, ಜರಿಮಲೆ ಮೊದಲಾದ ಚಾರಿತ್ರಿಕ ಮತ್ತು ಧಾರ್ಮಿಕ ಸ್ಥಳಗಳಿಗೆ ನಡೆದುಕೊಳ್ಳುವ ಜನರು ಇಲ್ಲಿದ್ದರು. ಕ್ರಮೇಣ ಈ ಗ್ರಾಮ ಹಾಳಾಯಿತು. ಇದಕ್ಕೆ ಕಾರಣಗಳು ನಿಖರವಾಗಿ ತಿಳಿದುಬಂದಿಲ್ಲ. ಆದರೂ ಸ್ವಾಭಾವಿಕವಾಗಿ ಹೇಳುವುದಾದರೆ ಪ್ರಕೃತಿ ವಿಕೋಪವೆಂದು (ಭೂಕಂಪ, ಇನ್‌ಫ್ಲೂಯಂಜಾ, ಕಾಲರಾ ಇತ್ಯಾದಿ) ಅತಿವೃಷ್ಠಿ, ಅನಾವೃಷ್ಠಿಗಳು ಕಾರಣವೆಂದು ನಂಬಲಾಗಿತ್ತು. ಬ್ರಿಟಿಷರ (ಮದ್ರಾಸ್ ಅಧಿಪತ್ಯ) ಅವಧಿಯಲ್ಲಿ ಅಂದರೆ ಕ್ರಿ.ಶ.೧೮೯೯ರ ಸುಮಾರಿಗೆ ಈ ಪ್ರದೇಶದಲ್ಲಿ ವ್ಯಾಪಕವಾಗಿ ಪ್ಲೇಗ್ ರೋಗ ಹಬ್ಬಿತ್ತು ಇದರಿಂದ ಸಹಸ್ರಾರು ಜನರು ತೀರಿದರು.

ಈ ಕರೆಪೂಜಾರಹಳ್ಳಿ ಗ್ರಾಮದಲ್ಲಿ ಕೆಲವರು ತೀರಿಕೊಂಡಿದ್ದರಿಂದ ತಮ್ಮ ವಾಸದ ನೆಲೆಗಳನ್ನು ಬದಲಿಸಿ ಮೂರು ಕಿ.ಮೀ ದೂರದಲ್ಲಿ ಹಟ್ಟಿಯನ್ನು ನಿರ್ಮಿಸಿಕೊಂಡರು. ಅಲ್ಲೊಂದು ಕೆರೆಯನ್ನು ಕಟ್ಟಿ ಆಲದ ಮರದ ಕೆಳಗೆ ದನ ಮತ್ತು ಕುರಿಗಳನ್ನು ತರುಬಿ ಜೀವನ ಸಾಗಿಸುತ್ತಿದ್ದರು. ಕ್ರಮೇಣ ಅಲ್ಲಿ ಕನ್ನಿಬೋರಯ್ಯನಹಟ್ಟಿ, ಪೂಜಾರಹಳ್ಳಿ ಎಂಬ ನೂತನ ಗ್ರಾಮಗಳು ಉದಯವಾದವು.[೧೫] ಈಗ್ಗೆ ಸುಮಾರು ೧೦೫ ವರ್ಷಗಳ ಇತಿಹಾಸ ಈ ಗ್ರಾಮಗಳಿಗಿದೆ.

**ಕಟ್ಟಿಂಗಹಳ್ಳಿ**

ಕೂಡ್ಲಿಗಿ ತಾ॥ ಪೂಜಾರಹಳ್ಳಿ ಗ್ರಾಮದ ವ್ಯಾಪ್ತಿಗೆ ಈ ಹಾಳೂರಿನ ನಿವೇಶನವಿದೆ. ಕಟ್ಟಿಂಗ (ಕಟ್ಟಿಗ) ನೆಂಬ (ಜಟ್ಟಿಗ–ಜಟಿಂಗ) ಮೂಲಕ ಈ ಹೆಸರು ಬಂದಂತಿದೆ. ಶಾಸನಗಳಲ್ಲಿ ‘ಕೆಲ್ಲ’ ಜನಾಂಗದ ಬಗ್ಗೆ ಉಲ್ಲೇಖವಿರುವುದನ್ನು ಡಾ.ಎಂ.ಬಿ.ನೇಗಿನಹಾಳರು ಪತ್ತೆಹಚ್ಚಿದ್ದಾರೆ. ಅದೇ ಪ್ರಭೇದಕ್ಕೆ ಸೇರಿದ ಕಟ್ಟಿಗರು ತಾವು ನೆಲೆಸಿರುವ ಸ್ಥಳಕ್ಕೆ ಆ ಹೆಸರನ್ನು ಇಟ್ಟುಕೊಂಡಿರಬೇಕು. ಕಟ್ಟಿಂಗನಹಳ್ಳಿ ಪ್ರಾಚೀನ ಮಾನವರು ನೆಲೆಸಿದ ಸ್ಥಳ ಇಲ್ಲಿ ಸುತ್ತಲೂ ಮಣ್ಣಿನಿಂದ ಏರಿದಿಬ್ಬ ಅಥವಾ ರಕ್ಷಣಾ ಕೋಟೆ ಬತೇರಿಗಳಿವೆ. ಇವುಗಳ ನಡುವೆ ಬೃಹತಾಕಾರದ ಮನೆ ನಿವೇಶನಗಳು, ಬೀದಿಬಾವಿಗಳು, ಕಾರ ರುಬ್ಬುವ ಕಲ್ಲು, ಬೀಸುವಕಲ್ಲು ಇತರೆ ಅವಶೇಷಗಳು ಮತ್ತು ಉಪಕರಣಗಳು ಕಂಡುಬಂದಿವೆ. ಈ ನಿವೇಶನಕ್ಕೆ ದಕ್ಷಿಣಾಭಿಮುಖವಾಗಿ ದ್ವಾರಗಳಿದ್ದು ಪೂರ್ವಾಭಿಮುಖವಾಗಿ ಮನೆ ಬಾಗಿಲುಗಳಿವೆ. ಇಲ್ಲಿ ಕಂಡುಬರುವ ಪ್ರತಿಯೊಂದು ಕಟ್ಟಡವು ಭಗ್ನಗೊಂಡರೂ ಗತಕಾಲದ

ಚರಿತ್ರೆಯನ್ನು ನೆನಪಿಸುತ್ತವೆ. ಮಡಿಕೆ ಚೂರುಗಳು ಗೃಹ ಜೀವನಕ್ಕೆ ಬಳಸಿದ ಇತರ ಪರಿಕರಗಳು ಹೆಚ್ಚಾಗಿವೆ. ಇಂಥಾ ಸುಸ್ಥಿತಿಯ ಗ್ರಾಮ ವಿನಾಶ ಆಗಲಿಕ್ಕೆ ಕಾರಣಗಳೇನೆಂಬುದು ಖಚಿತವಾಗಿ ತಿಳಿದುಬಂದಿಲ್ಲ. ಸ್ಥಳೀಯರು ಹೇಳುವಂತೆ ಭಯಂಕರವಾದ ರೋಗಗಳಾದ ಇನ್‌ಪ್ಲೋಯೆಂಜಾ, ಕಾಲರಾ, ಪ್ಲೇಗು ಬಂದು ಸಾವು ನೋವು ಸಂಭವಿಸಿದಾಗ ಇದನ್ನು ತೊರೆದು ಕೆರೆ ದಂಡೆಯ ಹೊಲದಲ್ಲಿ ಹೋಗಿ ನೆಲಸಿದಂತೆ ಸುಮಾರು ೨.೩ ಕಿ.ಮೀ ಅಂತರವಿರುವ ಸಂಗನಹಳ್ಳಿಯು ಇಂದು ಲಂಬಾಣಿಹಟ್ಟಿ ಎಂಬ ಹೆಸರಿನಿಂದ ಉದಯವಾಗಿದೆ.

**ಕುಮತಿ**

ಈ ನೆಲೆ ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನಲ್ಲಿದೆ. ಬೃಹತ್ ಶಿಲಾಯುಗದ ಗೋರಿ ನೆಲೆ, ಮಾನವಾಕೃತಿಗಳು ದೊರೆತಿವೆ.[೯] ತಾಲ್ಲೂಕು ಕೇಂದ್ರದಿಂದ ಸುಮಾರು ೪೦ ಕಿ.ಮೀ ದೂರದಲ್ಲಿದೆ. ಗ್ರಾಮದ ಕೆರೆಯ ಸಮೀಪ ಕೆ.ಎಂ.ತಿಪ್ಪೇರುದ್ರಯ್ಯನವರ ಜಮೀನಿನಲ್ಲಿ ಚಿನ್ನಹಗರಿ ನದಿ ದಂಡೆಯ ಮೇಲಿದೆ. ಒಂದು ಕಿಂಡಿ ಕೋಣೆಯ ಕಲ್ಗೋರಿ ದೊರೆತಿದೆ. ಏಳು ಮಾನವಕಾರದ ಏಕಶಿಲಾ ಸಮುಚ್ಚಯಗಳಿವೆ. ಅವುಗಳಲ್ಲಿ ಎರಡು ಸುಸ್ಥಿತಿಯಲ್ಲಿವೆ. ದಕ್ಷಿಣೋತ್ತರವಾಗಿ ನಿಲ್ಲಿಸಲಾಗಿದ್ದು ಪೂರ್ವರ್ಧಮುಖವಾಗಿದೆ.

**ಈ ಶಿಲ್ಪಗಳ ಎತ್ತರ**

ಎಡಭಾಗಶಿಲ್ಪ – ೩.೦೨ ಮೀ ಎತ್ತರ

೨.೪೩ ಮೀ ಎದೆಭಾಗ ಅಗಲ

೧.೪೬ ತಳಭಾಗದ ಅಳತೆ

ಬಲಭಾಗದ ಶಿಲ್ಪ– ೨.೦೭ ಮೀ ಎತ್ತರ

೨.೩೬ ಮೀ ಎದೆ ಭಾಗದ ಅಗಲ

೧.೨೫ ಮೀ ತಳಭಾಗ

ಈ ಎರಡೂ ಶಿಲ್ಪಗಳ ನಡುವಿನ ಅಂತರ ೫.೭೫ ಮೀಟರ್‌ಗಳು. ಈ ಶಿಲ್ಪಗಳು ಕುಮತಿ ಮತ್ತು ವಲಸೆ ಗ್ರಾಮಗಳ ಮಧ್ಯೆ ಅಪೂರ್ವವಾದ ಎರಡು ರಾಕ್ಷಸ ಕಲ್ಲುಗಳಿವೆ. ಇವು ಬೃಹತ್ ಶಿಲಾ ಸಂಸ್ಕೃತಿಗೆ ಸೇರಿವೆ. ಇವುಗಳ ಬಗ್ಗೆ ಜನಾಂಗಿಕ ಕಥೆಗಳು ಅಪಾರವಾಗಿ ಹುಟ್ಟಿಕೊಂಡಿವೆ." ಸುಂಕಪ್ಪನು ಬಿಲ್ಲಿಡಿದು ಬಾಣ ಹೊಡೆದುದರಿಂದ ದುಷ್ಟರು ಅಲ್ಲೆ ನಿಂತರೆಂದು ಕುಮತಿ ಸಿದ್ದೇಶ್ವರನ ಭಕ್ತರೆಂದು ಕಥೆಗಳು ಹೇಳುತ್ತಿವೆ".[೧೦] ಸುಮಾರು ೧೨ ಅಡಿ ಎತ್ತರ ೪ ಅಡಿಅಗಲವಿದ್ದು, ಏಕಶಿಲಾ ಗೋರಿಗಳಂತೆ ಕಾಣಸಿಗುತ್ತವೆ. ಇಲ್ಲಿರುವ ಬೃಹತ್ ಶಿಲಾಯುಗದ ಮಾನವಕೃತಿಯ

ಬಂಡೆಗಲ್ಲುಗಳಿಂದ ಕುಮತಿ ಗ್ರಾಮವೂ ಪ್ರಸಿದ್ಧಿ ಹೊಂದಿರುವುದು. ಇವುಗಳನ್ನು ಕಣಶಿಲೆಯಲ್ಲಿ ರಚಿಸಲಾಗಿದೆ. ಪ್ರಾಗೈಸಿಹಾಸಿಕ ಜನಜೀವನ ಪ್ರತಿಬಿಂಬಿಸುವ ಇಂತಹ ಸ್ಮಾರಕಗಳು ಕರ್ನಾಟಕದಲ್ಲಿ ತುಂಬಾ ವಿರಳವಾಗಿವೆ. ಸ್ಥಳೀಯರು ಇಂದಿಗೂ ಕುಮತಿಯಲ್ಲಿರುವ ರಾಕ್ಷಸಕಲ್ಲುಗಳಿಗೆ ಪ್ರಮುಖ ಹಬ್ಬ ಹರಿದಿನಗಳಲ್ಲಿ ವಿಶೇಷ ಪೂಜೆಯನ್ನು ಮಾಡಿ ಎಡೆಯನ್ನು ಹಾಕುತ್ತಾರೆ.

**ಕಂಪಳದೇವರಹಟ್ಟಿ**

ಕಂಪಳದೇವರಹಟ್ಟಿಗೆ 'ಚಿಕ್ಕುಂತಿ' ಎಂದು ಕರೆಯುತ್ತಾರೆ. ಜೋಗಿಹಳ್ಳಿ ಕಡೆಯಿಂದ ಬಂದ ಸಂಗಮಿಸುವ ಸ್ಥಳದಲ್ಲಿ ಮಧ್ಯಮರದಗಂಗಮ್ಮ ದೇವಸ್ಥಾನ, ಸಿದ್ದಲಿಂಗೇಶ್ವರಮಠ, ತುರುಕಾಳಗ ನೆಡೆದ ವೀರಗಲ್ಲುಗಳು ಶಿವಾಲಯಗಳಿವೆ. ಅಲ್ಲಿನ ಅಂಶಗಳನ್ನು ಗಮನಿಸಿದಾಗ ಜನವಸತಿ ನೆಲೆಗಳ ಅವಶೇಷಗಳು ಸಮಾಧಿಗಳು ಕಂಡುಬರುತ್ತವೆ. ಚಿಕ್ಕುಂತಿ ಎನ್ನುವುದು ಬೇಚರಾಕ್ ಗ್ರಾಮವಾಗಿದೆ ಎಂದು ಹೇಳಬಹುದು.

**ಸಿದ್ದಯ್ಯನಕೋಟೆ**

ಚಿನ್ನಹಗರಿ ನದಿಯ ಬಲದಂಡೆಯಲ್ಲಿ ಬರುವ ನೆಲೆ ಇದು ಮೊಳಕಾಲ್ಮೂರು ತಾಲ್ಲೂಕಿನಲ್ಲಿದೆ. ಸಿದ್ದಯ್ಯನಕೋಟೆಯಲ್ಲಿ ಕಬ್ಬಿಣದ ಕುಲುಮೆಯಿದ್ದು ಇಲ್ಲಿರುವ ಅವಶೇಷಗಳು ೨೫೦ ಅಡಿ ಉದ್ದ ೭೦ ಅಡಿ ಅಗಲದಷ್ಟು ವ್ಯಾಪಕವಾಗಿ ಹರಡಿಕೊಂಡಿದೆ. ಈ ಸ್ಥಳದಲ್ಲಿ ಕಬ್ಬಿಣದ ಅಂಶವಿರುವ ಬೂದಿ ಮಣ್ಣು ಕಬ್ಬಿಣದ ಕಿಟ್ಟ ಕುಲುಮೆಯ ಮೂಸೆ (ಕೊಳವೆ) ಅವಶೇಷಗಳಿವೆ. ಊರಿನ ಸುತ್ತ ರಕ್ಷಣಾ ಕೋಟೆ ಇದ್ದುದರಿಂದ ಈ ಹೆಸರು ಬಂದಿರಬಹುದು. ಇಲ್ಲಿ ಸಿಕ್ಕಿರುವ ಪ್ರಾಚ್ಯ ಅವಶೇಷಗಳನ್ನು ಬೇರೆ ನೆಲೆಗಳಿಗೆ ಹೋಲಿಸಿ ನೋಡಿದರೆ ಬಹುಶಃ ವಿಜಯನಗರ ಕಾಲದ್ದಿರಬಹುದೆಂದು ತಿಳಿಯಲಾಗಿದೆ.

**ಮಠದಜೋಗಿಹಳ್ಳಿ**

ಮೊಳಕಾಲ್ಮೂರು ತಾಲ್ಲೂಕು ರಾಯಾಪುರ ಗ್ರಾಮ ಪಂಚಾಯ್ತಿ ವ್ಯಾಪ್ತಿಯಲ್ಲಿ ಮಠದಜೋಗಿಹಳ್ಳಿ, ತುಪ್ಪದಕ್ಕನಹಳ್ಳಿ, ರಂಗಯ್ಯದುರ್ಗ ಈ ಮೂರು ನಿವೇಶನಗಳು ಕಂಡುಬರುತ್ತವೆ. ಈ ಮೂರು ನೆಲೆಗಳು ಅಕ್ಕಪಕ್ಕದಲ್ಲಿದ್ದು, ಬೇಚರಾಕ್ ಗ್ರಾಮ ಹಾಗೂ ಹಾಳೂರುಗಳಾಗಿವೆ. ಇಲ್ಲಿ ವಸತಿನೆಲೆಯ ಪ್ರಾಚ್ಯ ಅವಶೇಷಗಳು, ಪಾತ್ರೆ (ಉಗ್ರಾಣ) ಗಳು ಆಂಜನೇಯನ ಮೂರ್ತಿ, ತುಪ್ಪದಕ್ಕನ ವಿಗ್ರಹ ದೊರೆತಿವೆ. ಈ ನೆಲೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಬ್ಬಿಣ ದಿಬ್ಬ ಸಿಗುತ್ತದೆ. ಕಪ್ಪುಮಣ್ಣು ಕಬ್ಬಿಣದ ಕಿಟ್ಟ ಕುಲುಮೆಯ ಮೂಸೆ (ಕೊಳವೆ)ಹಾಗೂ ಕಬ್ಬಿಣದ ಕುಲುಮೆ ಸಿಕ್ಕಿವೆ. ಬಹುಶಃ ಮಠದ ಜೋಗಿಹಳ್ಳಿಯಲ್ಲಿ ಹಿಂದೆ ಮಠವಿದ್ದು, ಜೋಗಯ್ಯ ಎನ್ನುವ ಸ್ವಾಮಿ ನೆಲೆಸಿರಬಹುದು. ಆ ಸ್ವಾಮಿಯಿಂದ ಮಠದಜೋಗಿಹಳ್ಳಿ ಎಂಬ ಹೆಸರು ಬಂದಿರಬಹುದು.

**ಹುರಡಿಹಳ್ಳಿ**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲೂಕಿನಲ್ಲಿರುವ ಹುರಡಿಹಳ್ಳಿ ಒಂದು ಕುಗ್ರಾಮ. ಇಲ್ಲಿ ಬೃಹತ್ ಶಿಲಾಯುಗಕ್ಕೆ ಸಂಬಂಧಿಸಿದ ಸಮಾಧಿ ನೆಲೆ ಕಂಡುಬಂದಿದೆ. ಇಲ್ಲಿ ಲಿಂಗಮುದ್ರೆಕಲ್ಲು, ವೀರಗಲ್ಲು, ಮಾಸ್ತಿಕಲ್ಲು ಸಿಕ್ಕಿವೆ. ಈ ಗ್ರಾಮ ರಂಗಯ್ಯನದುರ್ಗ ಜಲಾಶಯದ ದಡದಲ್ಲಿ ನೆಲೆಗೊಂಡಿದೆ. ಜಲಾಶಯದ ಮಧ್ಯೆ ಪ್ರಾಚೀನ ಕಾಲದ ಬಸವಣ್ಣ ದೇವಾಲಯವಿದೆ. ಅದು ಈಗ ನೀರಿನಿಂದ ಆವೃತವಾಗಿದೆ. ಸ್ವಲ್ಪ ಭಾಗ ಮಾತ್ರ ಕಾಣಿಸುತ್ತದೆ.

**ಹಾನಗಲ್**

ಹಾನಗಲ್ ನಿವೇಶನವೂ ಮೊಳಕಾಲ್ಮೂರು ತಾಲ್ಲೂಕಿನಲ್ಲಿದೆ. ಬೃಹತ್ ಶಿಲಾ ಸಂಸ್ಕೃತಿಗೆ ಸೇರಿದ ನಿವೇಶನ ಇಲ್ಲಿ ಈಟಿ, ಭರ್ಜಿ, ಕತ್ತಿ, ಬಿಲ್ಲು, ಗವಿವರ್ಣ ಚಿತ್ರಗಳು ಬೇಟೆಯಾಡುವ ದೃಶ್ಯಗಳು ಸಿಗುತ್ತವೆ. ಸಮಾಧಿ ನೆಲೆ  ಬಹ್ಮಗಿರಿ ನೆಲೆಗೆ ಹೋಲುತ್ತದೆ. ಸೂಕ್ಷ್ಮ ಶಿಲಾಯುಧಗಳು ನೂತನ ಶಿಲಾಯುಗದ ಕೈಕೊಡಲಿಗಳು, ಸಮಾಧಿಗಳು ಹಾನಗಲ್ಲಿನ ಪೂರ್ವಕ್ಕಿರುವ ಅಕ್ಕಮ್ಮನ ದೇವರಗುಡಿ ಎಂದು ಕರೆಯುವ ಗುಹಾಲಯದಲ್ಲಿ ನೂತನ ಶಿಲಾಯುಗಕ್ಕೆ ಸಂಬಂಧಿಸಿದ ಚಿಕ್ಕ ಹಾಗೂ ದೊಡ್ಡ ಗಾತ್ರದ ಕೊಡಲಿಗಳು, ಬಾಚಿಗಳು, ಉಳಿಗಳು, ಸುತ್ತಿಗೆಗಳು ಇನ್ನು ಮೊದಲಾದ ಸುಮಾರು ೪೦-೫೦ ಆಯುಧಗಳಿದ್ದು, ಅವುಗಳನ್ನು ಜನರು ಇಂದಿಗೂ ಪೂಜಿಸುತ್ತಾರೆ. ಪೂರ್ವಕ್ಕಿರುವ ಎರಡು ಗುಡ್ಡಗಳ ಮಧ್ಯೆ ಹಾಗೂ ಪಶ್ಚಿಮದ ತಂಪಿನಹಟ್ಟಿಯಲ್ಲಿ ಬೂದಿದಿಬ್ಬ ದೊರಕಿದೆ.

**ಭಟ್ಟರಹಳ್ಳಿ**

ಬೃಹತ್ ಸಮಾಧಿಗಳು, ಅಲೈನ್ ಮೆಂಟ್‌ಗಳು, ಕಿಂಡಿಕೋಣೆ ಸಮಾಧಿಗಳು,ಪಿಲ್ಲಿಗುಂಡ್ಲು ಮತ್ತು ಮೊರೆಯರ ಮನೆಗಳು ಕಂಡುಬಂದಿವೆ. ಮೊಳಕಾಲ್ಮುರು ತಾಲೂಕಿನಲ್ಲಿ ಹೆಚ್ಚಿನ ಜನರು ತೆಲಗು ಮಾತಾಡುವುದರಿಂದ ಬೃಹತ್ ಶಿಲಾಸಮಾಧಿಗಳನ್ನು ಇಲ್ಲಿನ ಜನರು ತೆಲಗು ಪದಗಳಾದ ಮೋರ್ಲಬಂಡ್ಲು,ಮೋರ್ಲುಇಂಡ್ಲು ಎಂದು ಕರೆದಿರಬಹುದು. ಮೊರ ಎಂದರೆ ನವಿಲು ಎಂದರ್ಥ. ಮೊರೆಯ ಎಂದರೆ ಹರ್ಷದಾಯಕ ಅಥವಾ ಸಂತೋಷಭರಿತ ಜನರಿಂದ ತುಂಬಿದ ನಾಡು ಎಂದಾಗುತ್ತದೆ. ಇಲ್ಲಿ ಒಂದು ವೀರಗಲ್ಲು ಕಂಡುಬಂದಿದೆ.

**ನಾಗಸಮುದ್ರ**

ನಾಗಸಮುದ್ರದ ಕೆರೆಯ ಅಂಚಿನಲ್ಲಿರುವ ಗುಡ್ಡದ ಪೂರ್ವ ತಪ್ಪಲಿನಲ್ಲಿ ಬೂದಿದಿಬ್ಬದ ಅವಶೇಷ ಕಂಡುಬಂದಿದೆ. ಕಮ್ಮಾರತಿಮ್ಮಪ್ಪನ ಹೊಲ ಮತ್ತು ಸಣ್ಣೋಬಯ್ಯನ ಹೊಲ ಹಾಗೂ

ದೇವರಹಳ್ಳಿಗಳಲ್ಲಿ ಬೃಹತ್ ಶಿಲಾಯುಗದ ಸಮಾಧಿಗಳು ಕಂಡುಬಂದಿವೆ. ಹಾದಿಕೋಣೆ ಸಮಾಧಿ, ಕೈರನ್ ಸಮಾಧಿಗಳು ಕಂಡುಬಂದಿವೆ. ಶ್ರೀಕೃಷ್ಣದೇವರಾಯ ತನ್ನ ತಾಯಿಯ ನೆನಪಿಗಾಗಿ ನಾಗಸಮುದ್ರ ಎಂಬ ಗ್ರಾಮ ನಿರ್ಮಿಸಿರಬಹುದು.

**ಮೊಳಕಾಲ್ಮೂರು**

ಚಿತ್ರದುರ್ಗ ಜಿಲ್ಲೆಯ ತಾಲ್ಲೂಕಿನ ಕೇಂದ್ರ ಸ್ಥಳ ನಿವೇಶನ ನುಂಕೆಮಲೆ ಬೆಟ್ಟದಲ್ಲಿದೆ. ಈ ನೆಲೆಯಲ್ಲಿ ಕಿಂಡಿ ಕೋಣೆ ಮತ್ತು ಚಿಕ್ಕ ಚಿಕ್ಕ ಕೈರನ್ ಸಮಾಧಿಗಳಿವೆ. ಇಲ್ಲಿರುವ ಸಮಾಧಿಯೊಳಗೆ ಇನ್ನೊಂದು ಚಿಕ್ಕ ಸಮಾಧಿ ಅಂದರೆ ಇದು ಒಂದು ಸಮಾಧಿಯೊಳಗೆ ಇನ್ನೊಂದು ಬಹುಶಃ ಈ ಸಮಾಧಿಯು ತಾಯಿ ಮಗುವಿನ ಸಮಾಧಿಯಾಗಿರಬಹುದು ಅವರಿಬ್ಬರೂ ಏಕಕಾಲದಲ್ಲಿ ಮರಣ ಹೊಂದಿರಬಹುದುದಲ್ಲದೆ ಆ ಸ್ತ್ರೀ ಬಾಣಂತಿಯೂ ಆಗಿರಬಹುದು, ಇಲ್ಲವೆ ತಾಯಿ ಸತ್ತು ಹೊದ ನಂತರ ಆಕೆಗಾಗಿ ಸಮಾಧಿಯನ್ನು ನಿರ್ಮಿಸಿದ ಮೇಲೆ ಸ್ವಲ್ಪ ಕಾಲದ ನಂತರ ಮಗುವು ಸತ್ತಿರಬಹುದು. ಆಗ ಸತ್ತ ಮಗುವನ್ನು ತನ್ನ ತಾಯಿಯ ಸಮಾಧಿಯೊಳಗೆ ಹೂಳಿರುವ ಸಾಧ್ಯತೆಗಳಿವೆ. ಅಲ್ಲದೆ ಮರಣ ಹೊಂದಿದ ಆ ಸ್ತ್ರೀಯು ತುಂಬು ಗರ್ಭಿಣಿಯಾಗಿರಬಹುದು. ಆಕೆಗಾಗಿ ಒಂದು ಸಮಾಧಿಯನ್ನು ನಿರ್ಮಿಸಿ ಆಕೆಯ ಹೊಟ್ಟೆಯೊಳಗಿರುವ ಮಗುವನ್ನು ಸೂಚಿಸಲು ಆ ಸಮಾಧಿಯೊಳಗೆ ಇನ್ನೊಂದು ಸಮಾಧಿಯನ್ನು ನಿರ್ಮಿಸಿರಲೂಬಹುದು. ಇದು ತಾಯಿ ಮಗುವಿನ ಮಮತೆಯ ಸಂಕೇತವನ್ನು ಸೂಚಿಸುತ್ತದೆ. ಈ ನೆಲೆಯು ಬೃಹತ್ ಶಿಲಾ ಸಂಸ್ಕೃತಿಗೆ ಸೇರುತ್ತದೆ. ನಿಲುಸುಗಲ್ಲು ಬೃಹತ್ ಶಿಲಾಯುಗದ ಕಪ್ಪು ಮಡಿಕೆಗಳು ಕೆಂಪು ಮಡಿಕೆಗಳು ಸಿಕ್ಕಿವೆ.

**ಬ್ರಹ್ಮಗಿರಿ**

ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನ ಬ್ರಹ್ಮಗಿರಿ ಮೌರ್ಯ ಸಾಮ್ರಾಜ್ಯಕ್ಕೆ ಸೇರಿದ ಮಹಾ ಮಾತ್ರರ ಆಡಳಿತ ಕೇಂದ್ರವಾಗಿದ್ದುದನ್ನು, ಇಲ್ಲಿ ದೊರೆತ ಅಶೋಕನ ಶಾಸನಗಳನ್ನು ಈಗಾಗಲೇ ಗಮನಿಸಲಾಗಿದೆ.[೮] ಆದರೆ ಶಾತವಾಹನರ ಸಂಬಂಧ ಈ ಪ್ರದೇಶದೊಡನೆ ಇದ್ದುದನ್ನು ಇಲ್ಲಿ ಗುರುತಿಸುವ ಅವಶ್ಯಕತೆಯಿದೆ. ಬ್ರಹ್ಮಗಿರಿಯು ಇತಿಹಾಸಾರಂಭ ಕಾಲ ನಿವೇಶನವಾಗಿಯೂ ಗುರುತಿಸಲ್ಪಟ್ಟಿದೆ. ಮುಖ್ಯವಾಗಿ ಖನಿಜ ಸಂಪನ್ಮೂಲಗಳನ್ನು ಶೋಧಿಸಿ ತಮ್ಮ ಬದುಕನ್ನು ಶ್ರೀಮಂತವಾಗಿಸಲು ಪ್ರಯತ್ನಿಸುತ್ತಿದ್ದ ಜನರು ಇಲ್ಲಿ ನೆಲಸಿದ್ದಿರುವ ಸಾಧ್ಯತೆಯಿದ್ದಿರುವ ಕುರುಹುಗಳು ಕಂಡುಬರುತ್ತವೆ. ಈ ದೃಷ್ಟಿಯಿಂದಲೂ ನೈಸರ್ಗಿಕ ಸಂಪನ್ಮೂಲಗಳನ್ನು ಹಿಡಿತದಲ್ಲಿರಿಸಿಕೊಳ್ಳುವ ಚಟುವಟಿಕೆಯುಳ್ಳ ಕೇಂದ್ರವಾಗಿಯೂ ಬ್ರಹ್ಮಗಿರಿ ಇದ್ದುದು ಸ್ಪಷ್ಟ. ಈ ಕಾರಣಕ್ಕಾಗಿಯೇ ಇದು ಪ್ರಾಂತೀಯ ರಾಜಕೀಯ ನೆಲೆಯಾಗಿಯೂ ಬೆಳೆದುದು. ಬ್ರಹ್ಮಗಿರಿ ಪರಿಸರದಲ್ಲಿ ಒಕ್ಕಲುತನ ಅಭಿವೃದ್ಧಿ ಹೊಂದಿದ್ದು. ಈ ನಿಟ್ಟಿನಲ್ಲಿ ಈ ಪ್ರದೇಶದಲ್ಲಿ ಹರಿಯುವ ಚಿನ್ನಹಗರಿ ನದಿ ನಿರ್ವಹಿಸಿದ

ಪಾತ್ರವೂ ಗಣನೀಯವಾದುದ್ದಾಗಿದೆ. ವ್ಯಾಪಾರ ವಹಿವಾಟುಗಳೊಡನೆ ವಿಪುಲವಾದ ಜನಸಂಖ್ಯೆಯೂ ಇಲ್ಲಿದ್ದಿತೆನ್ನುವುದಕ್ಕೆ ಹಾಗೂ ವಿಸ್ತಾರಗೊಂಡ ನಗರ ನೆಲೆಯಾಗಿದ್ದಿತೆನ್ನುವುದಕ್ಕೆ ಇಲ್ಲಿ ದೊರೆತ ವಿವಿಧ ಸಾಮಾಜಿಕ ಅಂತಸ್ತುಗಳಿಗೆ ಸೇರಿದ ವಸ್ತು ವಿಶೇಷಗಳೇ ಸಾಕ್ಷಿ. ಗ್ರಾಮಜೀವನದೊಡನೆ ನಗರಜೀವನವೂ ನೆಲೆಗೊಂಡಿದ್ದಿತೆನ್ನುವುದೇ ಸೂಕ್ತ. ಸನ್ನತಿ ಹಾಗೂ ಚಂದ್ರವಳ್ಳಿಗಳಂತೆ ಬ್ರಹ್ಮಗಿರಿ ಸಹ ಹರಳು ಶಿಲಾ ಪ್ರದೇಶದ ಪ್ರಮುಖ ನೆಲೆಯೊಂದು ಗುರುತಿಸಲ್ಪಟ್ಟಿರುವುದರಿಂದ, ಈ ಕಲ್ಲುಗಳಿಂದ ತಯಾರಿಸಿದ ಬೆಲೆಯುಳ್ಳ ಮಣಿಗಳು ಸಹಜವಾಗಿಯೇ ಇತರ ಭಾಗಗಳಿಗೆ ರೋಂ ನಂಥಾ ಹೊರದೇಶಗಳಿಗೆ ಸರಬರಾಜಾಗುತ್ತಿದ್ದವು.[೧೯]

ಶಾತವಾಹನರ ಆಳ್ವಿಕೆಯ ಅವಧಿಯಲ್ಲಿಯೂ ಬ್ರಹ್ಮಗಿರಿ ಪ್ರದೇಶದ ಜನರು ಬದುಕು ವೈವಿಧ್ಯಮಯವಾಗಿದ್ದಿತು. ಸನ್ನತಿ, ಬನವಾಸಿ, ವಡಗಾಂವ್‌ಮಾಧವಪುರ ಮುಂತಾದ ಕಡೆಗಳಲ್ಲಿ ಕಂಡುಬರುವ ಇಟ್ಟಿಗೆ ಕಟ್ಟಡಗಳ ಅವಶೇಷಗಳು ಬ್ರಹ್ಮಗಿರಿಯಲ್ಲಿಯೂ ಕಂಡುಬಂದಿದೆ. ಮುಖ್ಯವಾಗಿ ಮೌರ್ಯಕಾಲೀನ ಇಸಿಲ ನಗರದ ರಚನೆಯ ಕುರುಹುಗಳು ಯಾವುವು ಉಳಿದು ಬಂದಿಲ್ಲವಾದರೂ ತುಂಬಾ ಶಿಥಿಲವಾದ ಗಜಪುಷ್ಠಾಕಾರದ ಚೈತ್ಯ ಕಟ್ಟಡದ ಇಟ್ಟಿಗೆ ತಳಪಾಯವೊಂದು ಮಾತ್ರ ಸಿಕ್ಕಿದೆ.

ಬನವಾಸಿ ಪರಿಸರದಲ್ಲಿ ಕಂಡು ಬಂದ ಇಂಥಾ ಚೈತ್ಯ ಕಟ್ಟಡಗಳ ತಳಪಾಯಗಳ ಬಗ್ಗೆ ಈಗಾಗಲೇ ಪ್ರಸ್ತಾಪಿಸಲಾಗಿದೆ. ಚುಟು ಶಾತವಾಹನರ ಕಾಲದಲ್ಲಿ ನಿರ್ಮಾಣಗೊಳ್ಳಲಾರಂಭವಾದ ಈ ಗಜ ಪೃಷ್ಠಾಕಾರ ತಲವಿನ್ಯಾಸದ ಮಂದಿರಗಳು ಕದಂಬರ ಕಾಲದಿಂದ, ಆ ನಂತರ ಬಾದಾಮಿ ಚಾಲುಕ್ಯರ ಕಾಲಕ್ಕೆ ಮುಂದೆ ಕನಿಷ್ಠ ೧೧-೧೨ನೇ ಶತಮಾನದವರೆಗೂ ಪ್ರಚಲಿತವಿದ್ದುದನ್ನು ನೋಡಬಹುದು. ಶಾತವಾಹನರ ಕಾಲದ ಸೀಸದ ನಾಣ್ಯಗಳು ಈ ಪರಿಸರದ ಭೂಮಿಯ ಮೇಲ್ಪದರದಲ್ಲಿ ದೊರೆತಿರುವುದು ವಿಶೇಷ. ಸಿದ್ದಾಪುರ ಗ್ರಾಮದಲ್ಲಿ ಶವಸಂಸ್ಕಾರ ಪದ್ದತಿ ವಿಶಿಷ್ಟತೆಯಿಂದ ಕೂಡಿದೆ. ಶವಗಳನ್ನು ಒಂದೇ ಪ್ರದೇಶದಲ್ಲಿ ಹೂಳುತ್ತಾರೆ. ಎರಡು ಮೂರು ದಿನಗಳಲ್ಲಿ ಸತ್ತ ಹೆಣವನ್ನು ಅದೇ ಜಾಗದಲ್ಲಿ ಹೂಳುತ್ತಾರೆ. ಆಗ ವಾಸನೆ ಬರುವುದಿಲ್ಲ ಎಂದು ಸ್ಥಳೀಯರು ಹೇಳುತ್ತಾರೆ. ಹೆಣವನ್ನು ಹೂಳಿದ ನಂತರ ಮೇಲೆ ಸಗಣಿಯಿಂದ ಸಾರಿಸುತ್ತಾರೆ. ಸಾರಿಸಿದ ಜಾಗ ಬಿರುಕು ಬಿಟ್ಟರೆ ಇಂದು ಅಥವಾ ನಾಳೆ ಯಾರಾದರೂ ಮರಣ ಹೊಂದಬಹುದು ಎಂದು ಸ್ಥಳೀಯರಿಗೆ ತಿಳಿಯುತ್ತದೆ.

**ಜಟಂಗಿ ರಾಮೇಶ್ವರ.**

ಇದು ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿಗೆ ಸೇರಿದ ಚಾರಿತ್ರಿಕ ಮತ್ತು ಪ್ರಾಗೈತಿಹಾಸಿಕ ಕಾಲದ ಪ್ರಸಿದ್ದ ನೆಲೆಯಾಗಿದೆ. ಪ್ರಾಚೀನ ಕಾಲದಿಂದಲೂ ಮಾನವನ ಪ್ರಸಿದ್ದ

ನೆಲೆಯಾಗಿದೆ. ಕರ್ನಾಟಕದ ಪ್ರಾಚೀನ ಚರಿತ್ರೆಯನ್ನು ಮೊಟ್ಟಮೊದಲು ವೈಜ್ಞಾನಿಕ ದೃಷ್ಟಿಕೋನದಿಂದ ನೋಡಲು ಆರಂಭವಾದದ್ದು, ಈ ಜಿಲ್ಲೆಯಲ್ಲಿ ನಡೆದ ಚಂದ್ರವಳ್ಳಿ ಮತ್ತು ಬ್ರಹ್ಮಗಿರಿಗಳ ಉತ್ಖನನಗಳಿಂದ. ಈ ನೆಲೆಗಳು ಚಾರಿತ್ರಿಕವಷ್ಟೇ ಅಲ್ಲದೆ ಪ್ರಾಕ್ಚಾರಿತ್ರಿಕವಾಗಿಯೂ ಹಲವು ಸಂಗತಿಗಳನ್ನು ಹೊರಗಡೆ ಇವೆ. ಜೊತೆಗೆ ಭಾರತದ ಪ್ರಸಿದ್ಧ ಶಾಂತಿಪ್ರಿಯ ಅರಸ ಮೌರ್ಯ ಚಕ್ರವರ್ತಿ ಅಶೋಕನ ಆಳ್ವಿಕೆ ದಕ್ಷಿಣ ಭಾರತದಲ್ಲೂ ಹರಡಿತೆಂಬುದು ತಿಳಿದುಬಂದದ್ದು ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಟಂಗಿರಾಮೇಶ್ವರಗಳಲ್ಲಿ ಕಂಡುಬಂದ ಅವನ ಶಾಸನಗಳಿಂದ. "ಪ್ರಾಗೈತಿಹಾಸಿಕ ನೆಲೆ ನೂತನ/ತಾಮ್ರ ಬೃಹತ್ ಶಿಲಾ ಸಂಸ್ಕೃತಿ ಇತಿಹಾಸ ಕಾಲದಲ್ಲಿನ ಗವಿವರ್ಣ ಚಿತ್ರಗಳು, ದೇಗುಲ, ಕೋಟೆ–ಕೊತ್ತಲ, ಶಾಸನ ಮೊದಲಾದ ಆಕರಗಳು ಚರಿತ್ರೆ ಮತ್ತು ಪುರಾತತ್ವಜ್ಞರನ್ನು ಬಡಿದೆಬ್ಬಿಸುವಂತಿವೆ"[೨೦] ಪ್ರಾಕೃತಿಕವಾಗಿಯೂ ಜಟಂಗರಾಮೇಶ್ವರ ಕಣಶಿಲೆಯ ಬೃಹತ್ ಶಿಲಾಸ್ತೋಮಗಳನ್ನು ಒಳಗೊಂಡ ಬೆಟ್ಟಶ್ರೇಣಿಗಳ ಸಾಲನ್ನು ಹೊಂದಿವೆ. ಈ ಬೆಟ್ಟದ ಪರಿಸರವು ಆದಿಮಾನವ ವಾಸಕ್ಕೆ ಯೋಗ್ಯ ತಾಣವು ಹೌದು. ಇಲ್ಲಿನ ಬೆಟ್ಟಗಳು ಮಾನವನಿಗೆ ವಸತಿ ಯೋಗ್ಯ ಗುಹೆಗಳು, ನೀರಿನ ದೋಣಿಗಳು ಹಣ್ಣು– ಹಂಪಲಿನ ಮರಗಿಡಗಳನ್ನು ಒಳಗೊಂಡಿವೆ.

ಬ್ರಹ್ಮಗಿರಿ ಮತ್ತು ಜಟಂಗಿರಾಮೇಶ್ವರ ಬೆಟ್ಟಗಳ ಮಧ್ಯದ ಹಾಗೂ ಚಿನ್ನಹಗರಿ ನದಿ ದಂಡೆಯ ವಿಸ್ತಾರ ಬಯಲು ಪ್ರಾಚೀನ ಇಸಿಲಾ ಪಟ್ಟಣದ ಅಶ್ರಯ ತಾಣವಾಗಿದ್ದಿತು. ಬ್ರಹ್ಮಗಿರಿ ಮತ್ತು ಜಟಂಗಿರಾಮೇಶ್ವರ ಬೆಟ್ಟಗಳ ಮಧ್ಯೆ ಚಿನ್ನಹಗರಿ ನದಿ ಅಥವಾ ಜನಗಿಹಳ್ಳವೂ ಹಾವಿನೋಪಾದಿಯಲ್ಲಿ ಪ್ರಾಚೀನ ಇಸಿಲಾ ಪಟ್ಟಣದ ಜೀವಸೆಲೆಯಾಗಿ ಹರಿದು, ಇಂದಿಗೂ ಈ ಭಾಗದ ಜನರ ಜೀವನಾಡಿಯಾಗಿ ಪ್ರವಹಿಸುತ್ತಾ ಸಾಗಿದೆ.

**ಅಡಿ ಟಿಪ್ಪಣಿಗಳು**

೧. ಸುಂದರ ಅ(ಸಂ): ಕರ್ನಾಟಕ ಚರಿತ್ರೆ (ಸಂ೧), ಪು.ಸಂ. ೯೪–೯೫

೨. ಹೊಮೊನಿಡರ ಅಸ್ಟ್ರಾಲೋಪಿಥೆಕಸ್ ಮತ್ತು ಹೊಮೊಹೈಬಿಲಿಯಸ್‌ರೆಂಬ ಎರಡು ವರ್ಗಗಳಿದ್ದವೆಂದು ಗುರುತಿಸಲಾಗಿದೆ.

೩. ಸುಂದರ ಅ(ಸಂ): ಪೂರ್ವೋಕ್ತ, ಪು.ಸಂ. ೯೪–೯೫

೪. ಅದೇ, ಪು.ಸಂ. ೯೪–೯೫

೫. ಶಿವತಾರಕ್ ಕೆ.ಬಿ:ಕರ್ನಾಟಕದ ಪುರಾತತ್ವ ನೆಲೆಗಳು, – ಪು.ಸಂ.೪

೬. ಗಿರಿಜ. ಟಿ: ಚಿತ್ರದುರ್ಗ ಜಿಲ್ಲಾ ದರ್ಶಿನಿ, ಪು.೨೦೩

೭. ಸೋಮಶೇಖರ ಎಸ್.ವೈ: ಲೇಖನ ಇತಿಹಾಸ ದರ್ಶನ,೧೯೯೬,ಪು.ಸಂ. ೩೨–೩೩.

೮. ಶ್ರೀನಿವಾಸ ರಿತ್ತಿ: ಅಶೋಕನ ಧರ್ಮಶಾಸನಗಳು, ಪ್ರಸಾರಾಂಗ, ಕ.ವಿ.ವಿ. ಹಂಪಿ. ಪು.೩೩

೯. ಗಿರಿಜಾ .ಟಿ: ಚಿತ್ರದುರ್ಗ ಜಿಲ್ಲಾದರ್ಶಿನಿ, ಪು.ಸಂ.೧೦೦

೧೦. ಸೋಮಶೇಖರ. ಎಸ್.ವೈ: ಲೇಖನ ಇತಿಹಾಸ ದರ್ಶನ, ೧೯೯೭, ಸು.೧೨

೧೧. ಸೋಮಶೇಖರ ಎಸ್.ವೈ: ಲೇಖನ ಇತಿಹಾಸ ದರ್ಶನ, ೧೯೯೭,ಸು.೧೨

೧೨. ವಿರೂಪಾಕ್ಷಿ ಪೂಜಾರಹಳ್ಳಿ: ಚಿನ್ನಹಗರಿ ಸಿರಿ, ಪು.ಸಂ.೪

೧೩. ಅದೇ, ಪು.ಸಂ.೫

೧೪. ಅದೇ, ಪು.ಸಂ.೨೦

೧೫. ಅದೇ, ಪು.ಸಂ.೨೧

೧೬. ತಿಪ್ಪೇಸ್ವಾಮಿ ಎಚ್:ಕೂಡ್ಲಿಗಿ ತಾಲ್ಲೂಕಿನ ಪ್ರಾಗ್ಯೈತಿಹಾಸಿಕ ನೆಲೆಗಳು, ೧೯೯೯, ಇ.ದ. ಸಂ.೧೪, ಪು.ಸಂ.೨

೧೭. ವಿರೂಪಾಕ್ಷಿ ಪೂಜಾರಹಳ್ಳಿ: ಚಿನ್ನಹಗರಿ ಸಿರಿ, ಪು.ಸಂ.೧೫

೧೮. ಲಕ್ಷ್ಮಣ್ ತೆಲಗಾವಿ: 'ಮೌರ್ಯ ಮತ್ತು ಶಾತವಾಹನರ ಯುಗ,' ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.ಸಂ.೧೬೩

೧೯. ಲಕ್ಷ್ಮಣ್ ತೆಲಗಾವಿ: ಮೌರ್ಯ ಮತ್ತು ಶಾತವಾಹನರ ಯುಗ, ಪು.ಸಂ.೧೬೪

೨೦. ಸೋಮಶೇಖರ್.ಎಸ್.ವೈ: ಜಟಂಗಿರಾಮೇಶ್ವರದರ್ಶನ, ಸುಮೇಧ ಪ್ರಕಾಶನ ದೇವಸಮುದ್ರ ಪು ೩೫

## ಅಧ್ಯಾಯ : ನಾಲ್ಕು

# ಚಿನ್ನಹಗರಿ ನದಿ ಪರಿಸರದ ಧಾರ್ಮಿಕ ಕ್ಷೇತ್ರಗಳು

ನಮ್ಮ ಪ್ರಾಚೀನ ನಾಗರೀಕತೆಗಳು ಉದಯವಾದದ್ದು ನದಿಬಯಲಿನಲ್ಲೆ. ಮುಖ್ಯವಾಗಿ ನದಿ ಬಯಲಲ್ಲಿ ಜನವಸತಿ ಪ್ರಾರಂಭವಾದ ನಂತರ ತಮ್ಮ ನಂಬಿಕೆಯ ದೈವವೂ ಪ್ರತಿಷ್ಠಾಪನೆ ಆಗುತ್ತದೆ. ಚಿನ್ನಹಗರಿ ನದಿ ತನ್ನ ಮೂಲದಿಂದ ಅಂತ್ಯದವರೆಗೆ ಅನೇಕ ದೇವಾಲಯಗಳನ್ನು ಹೊಂದಿದೆ. ನದಿ ಬಯಲು ಧಾರ್ಮಿಕ ಕ್ಷೇತ್ರಗಳಿಗೆ ಚಾರಿತ್ರಿಕವಾದ ಮಹತ್ವವಿದೆ.ಅದು ಪಶುಪಾಲನೆ ಹಂತವನ್ನು ಕೃಷಿಹಂತವನ್ನು ಜೊತೆಯಾಗಿಯೇ ಸಂಕೇತಿಸುತ್ತದೆ.

ಚಿನ್ನಹಗರಿ ನದಿ ಪ್ರಾಚೀನ ಕಾಲದಿಂದಲೂ ಇಂದಿನವರೆಗೆ ವಿವಿಧ ನೆಲೆಗಳ ಮೂಲಕ ಜನಸಾಮಾನ್ಯರಿಗೆ ಬಳಕೆಯಾಗಿದೆ, ಈ ನದಿ ಪರಿಸರದಲ್ಲಿ ಅನೇಕ ಧಾರ್ಮಿಕ ಕ್ಷೇತ್ರಗಳಿವೆ. ಶೈವ, ವೈಷ್ಣವ, ಶಾಕ್ತೇಯ ಇತರ ಧರ್ಮಗಳ ದೇವಾಲಯಗಳಿವೆ. ಮಾನವನಲ್ಲಿ ದೈವದ ಕಲ್ಪನೆ ನಾಗರೀಕತೆಯೊಂದಿಗೆ ಬೆಳೆದುಬಂದಿದೆ. ಪ್ರಾಕೃತಿಕ ವಿಪತ್ತುಗಳಿಗೆ ಎದುರಿದ ಇವನು ಶಕ್ತಿಗಳ ಕಡೆ ವಾಲಿ ಅದನ್ನು ಪೂಜಿಸತೊಡಗಿದ. ಧರ್ಮ ಇಂದು ಹಲವಾರು ರೀತಿಯಲ್ಲಿ ಕಾರ್ಯನಿರ್ವಹಿಸುತ್ತದೆ. ಕೆಲವು ಆಚರಣೆ ಸಂಪ್ರದಾಯಗಳನ್ನು ಇಂದಿಗೂ ಉಳಿಸಿಕೊಂಡು ವಾರ್ಷಿಕ ಕ್ರಿಯಾಚರಣೆಯ ರೂಪದಲ್ಲಿ ಬಂದಿವೆ.

### ಓಬಳದೇವರ ಗುಡ್ಡ

ಓಬಳದೇವರ ಗುಡ್ಡವೂ ಚಿನ್ನಹಗರಿ ನದಿ ಅಥವಾ ಜನಗಿಹಳ್ಳ ಜನಿಸುವ ಸ್ಥಳದಲ್ಲಿದೆ. ಉಗಮದ ಸ್ಥಳಕ್ಕೆ ಸಮೀಪದಲ್ಲೇ"ಓಬಳದೇವರಗುಡಿ" ಇದೆ. ಈ ಗುಡಿಯ ಸುತ್ತಮುತ್ತ ಬೆಟ್ಟ ಗುಡ್ಡಗಳು ಸುತ್ತುವರಿಯಲ್ಪಟ್ಟಿವೆ ಹಾಗೂ ಸದಾ ಹಚ್ಚಹಸಿರಿನಿಂದ ಕಂಗೊಳಿಸುತ್ತದೆ. ವಿಶೇಷವಾಗಿ ಪೂಜೆ ಮಾಡಲು ಸುತ್ತಮುತ್ತಲಿನ ಜನ ಇಲ್ಲಿ ಬೀಡು ಬಿಡುತ್ತಾರೆ. ಮಕ್ಕಳಾಗದಿದ್ದರೆ ಈ ದೇವರಿಗೆ ಹರಕೆ ಮಾಡಿಕೊಂಡರೆ ಮಕ್ಕಳಾಗುತ್ತವೆ ಎನ್ನುವ ನಂಬಿಕೆ ಇದೆ. ಹಾಗೆ ಮಕ್ಕಳಾದರೆ ಹುಟ್ಟುವ ಮಕ್ಕಳಿಗೆ ದೇವರ ಹೆಸರಾದ ಓಬಯ್ಯ, ಓಬಳೇಶ, ಓಬಮ್ಮ, ಓಬಕ್ಕ ಮುಂತಾದ ಹೆಸರಿನ್ನಿಡುತ್ತಾರೆ. ನಾಯಕರು ಮತ್ತು ಗೊಲ್ಲ ಸಮುದಾಯದವರು ಈ ದೇವರಿಗೆ ಪೂಜೆ ಪುರಸ್ಕಾರಗಳನ್ನು ಹೆಚ್ಚಾಗಿ ಮಾಡುವುದು ಕಂಡು ಬರುತ್ತದೆ.

ಓಬಳಗುಡ್ಡ ಸುತ್ತಲೂ ಜೇನುಹುಟ್ಟುಗಳಿದ್ದು, ದೇವರಿಗೆ ಜೇನು ತುಪ್ಪವನ್ನು ಎಡೆಮಾಡುವ ನಂಬಿಕೆ ಸ್ಥಳೀಯರಲ್ಲಿ ಇದೆ ಎಂಬುದು ಗೊತ್ತಾಗುತ್ತದೆ.

**ಗೊಡಬನಹಾಳ್**

ಚಿತ್ರದುರ್ಗ ತಾಲ್ಲೂಕಿನಲ್ಲಿರುವ ಗ್ರಾಮ. ಜಾನುಕೊಂಡ ಸರ್ಕಲ್ಲಿನಿಂದ ಗಂಜಿಗಟ್ಟೆ ಮಾರ್ಗವಾಗಿ ಹೋದರೆ ಸುಮಾರು ೪ಮೈಲಿ ದೂರದಲ್ಲಿ ಈ ಗ್ರಾಮಸಿಗುತ್ತದೆ. ಗೊಡಬ ಎನ್ನುವ ಪಾಳೆಯಗಾರರ ಕಾಲದ ಜಟ್ಟಿಯೊಬ್ಬನ ಹೆಸರಿನಿಂದ ಈ ಊರಿಗೆ ಗೊಡಬನಹಾಳ್ ಎಂಬ ಹೆಸರು ಬಂದಿದೆ. ಇಲ್ಲಿ ಕಲ್ಲೇಶ್ವರ, ಕರಿಯಮ್ಮ. ವೀರಭದ್ರ. ಭೈರೇದೇವರ ಗುಡಿಗಳಿವೆ. ಕಲ್ಲೇಶ್ವರ ದೇವಾಲಯದ ಈಶಾನ್ಯದಲ್ಲಿ ಹಾಗೂ ಭೈರೇದೇವರ ಗುಡಿಯ ಬಳಿ ಅನೇಕ ವೀರಗಲ್ಲುಗಳಿವೆ. ಗೊಡಬನಹಾಳ್ ಶಾಸನದಿಂದ(೧೮೩೦ ನಮ್ಮ ಭಾರತವನ್ನು ಗೊಡಬನಹಾಳಿನ ಶಾಸನದಲ್ಲಿ "ಭರತಖಂಡ ಎಂದು ಕರೆಯಲಾಗಿದೆ.)ಜಿಲ್ಲೆಯಲ್ಲಿ ರಾಷ್ಟ್ರಕೂಟರ ಅಳ್ವಿಕೆಯನ್ನು ತಿಳಿಯಬಹುದಾಗಿದೆ(೯೮೬). ೩ನೇ ಕೃಷ್ಣನ ಕಾಲದಿಂದ ಕನ್ನಯ್ಯನು ( ಅಥವಾ ಕನ್ನರಸ, ಕನ್ನರ) " ನಿಧಿ ನಿಧಾನ ನಿಕ್ಷೇಪ ಸತಾಜ್ಞಾನ ಸಿದ್ಧಿಕೋಪ ಪ್ರಸಾದದಿಂದ" ಎನ್ನುವಂತೆ ರಾಜ್ಯವಾಳುತ್ತಿದ್ದನೆಂದು ತಿಳಿದು ಬರುತ್ತದೆ."[೧] ಹಾಗೂ ಈತ ತನ್ನ ತಂದೆಯ ಕಾಲದಲ್ಲೇ ಕದಂಬಳಿಗೆ ೧೦೦೦ ನಾಡನ್ನು ಆಳುತ್ತಿದ್ದನೆಂದು ತಿಳಿಯುತ್ತದೆ.

ಪಾಳೆಯಗಾರರ ಕಾಲದಲ್ಲಿ ಗೊಡಬನಹಾಳ್'ಸಮ್ಮತು' ವಾಗಿದ್ದು ಈ ಸಮ್ಮತಿಗೆ ಹನ್ನೆರಡು ಗ್ರಾಮಗಳು ಸೇರಿದ್ದು,ಇದರಲ್ಲಿ ನಾಲ್ಕು ಗ್ರಾಮಗಳನ್ನು ಗುಮಾಸ್ತೆ ನಾರಾಯಣಪ್ಪನಿಗೆ ೧೮೪೯ ರಲ್ಲಿ ಧಾರಪೂರ್ವಕವಾಗಿ ಕೊಡಲಾಗಿದೆ.

ಪ್ರತಿವರ್ಷ ಮಾರ್ಚ ತಿಂಗಳಲ್ಲಿ ವೀರಭದ್ರೇಶ್ವರ ಜಾತ್ರಾಮಹೋತ್ಸವ ನಡೆಯುತ್ತದೆ. ಜಾತ್ರೆಯಲ್ಲಿ ರಥೋತ್ಸವ ಮುಖ್ಯವಾದ ಕಾರ್ಯಕ್ರಮ. ರಥೋತ್ಸವ ಜರುಗುವ ಸಮಯದಲ್ಲಿ ಡೊಳ್ಳು,ನಗಾರಿ,ಕರಡಿವಾದ್ಯ,ಒಲಗ,ತಮಟೆ ಮುಂತಾದ ವಾದ್ಯಗಳ ಹಾಗೂ ಛತ್ರಿಚಾಮರ ಸಮೇತ ಹಾಜರಾಗಿದ್ದು ವಿಜೃಂಭಣೆಯಿಂದ ನಡೆಯುತ್ತದೆ.

**ದೇವರಪುರದ ಹಟ್ಟಿ**

ಚಿಕ್ಕ ತಿರುಪತಿಯೆಂದೇ ಖ್ಯಾತಿವಾಗಿರುವ ದೇವರಪುರದಹಟ್ಟಿ ಚಿತ್ರದುರ್ಗ ಹೊಳಲ್ಕೆರೆ ಮುಖ್ಯ ರಸ್ತೆಯಲ್ಲಿ ಸಿಗುತ್ತದೆ. ಇಲ್ಲಿ ಜನಿಗೆಹಳ್ಳಕ್ಕೆ ಸೇತುವೆ ಕಟ್ಟಿದ್ದಾರೆ. ಈ ಗ್ರಾಮದಲ್ಲಿ ದೇವಾಲಯಗಳ ಸಮೂಹವನ್ನೇ ನೋಡಬಹುದು. ವೆಂಕಟೇಶ್ವರ, ಕಾಳಿ,ವಿಷ್ಣು,ಈಶ್ವರ, ಸಪ್ತಮಾತೃಕೆಯರ ವಿಗ್ರಹಗಳು, ಬಾವಾಜಿಯವರ ಸಮಾಧಿಗಳಲ್ಲದೆ ಊರಿನಲ್ಲಿ ಗ್ರಾಮದೇವತೆಯೂ ಇದೆ. ಲಂಬಾಣಿ ಸಮುದಾಯದವರು ಇಲ್ಲಿನ ಪೂಜಾರಿಗಳು.ಇದೊಂದು ಮಠವಾಗಿದ್ದು ದೇವರ ಅನುಗ್ರಹದಿಂದ ಭಕ್ತಾಧಿಗಳು ದಾನ-ದತ್ತಿಗಳ ಮೂಲಕ ಇಲ್ಲಿನ ದೇವಾಲಯಗಳನ್ನು ಕಟ್ಟಿರುವುದು ಮತ್ತು ಜಿರ್ಣೋದ್ದಾರ ಮಾಡಿರುವುದು ಕಂಡುಬರುತ್ತದೆ. ಈ ಮಠಕ್ಕೆ ಭೂಮಿ ಮತ್ತು ಗೋಸಂಪತ್ತು ಇದೆ. ಸುಮಾರು ೫೫ ಎಕರೆ ವಿಸ್ತೀರ್ಣದಲ್ಲಿ ದೇವಾಲಯಗಳು ಮತ್ತು ವಸತಿಗಳಿವೆ. ಏಪ್ರಿಲ್ ತಿಂಗಳಿನಲ್ಲಿ ಇಲ್ಲಿ ಜಾತ್ರೆ ನಡೆಯುತ್ತದೆ ಮುಖ್ಯ ಆಚರಣೆಗಳೆಂದರೆ ಗಂಗಾಪೂಜೆ ಮತ್ತು ರಥೋತ್ಸವ.

ಜಾತ್ರೆಯ ಮೊದಲದಿನ ಪೂಜಾ ಕಾರ್ಯಗಳು ಗಂಗಾ ಪೂಜೆಯೊಂದಿಗೆ ಆರಂಭಗೊಳ್ಳುತ್ತವೆ. ಮಠದ ಆವರಣದಿಂದ ಹೊರಟ ದೇವರು ಜನಿಗೆಹಳ್ಳಕ್ಕೆ ಬಂದು ಜಲ ಹಾಕಿ ಹೊಸವಸ್ತ್ರ, ಹಣ್ಣು ಕಾಯಿ ಹೊಡೆದು ಪೂಜಿಸುತ್ತಾರೆ. ಕರಡಿವಾದ್ಯ, ನಂದಿಕೋಲು ಕುಣಿತ ಅಂದಿನ ವಿಶೇಷವಾಗಿದೆ. ಪುಣ್ಯ ಸ್ನಾನವಾದ ಕೂಡಲೇ ದೇವರನ್ನು ವಾಹನದಲ್ಲಿಟ್ಟು ಮೆರವಣಿಗೆ ಮಾಡುತ್ತಾರೆ. ಈ ಕಾರ್ಯ ಸೋಮವಾರ ಏರ್ಪಡುತ್ತದೆ. ರಥವನ್ನು ಅಂದೇ ಬಣ್ಣದ ಬಟ್ಟೆಗಳಿಂದ , ಹೂವುಗಳಿಂದ ಅಲಂಕಾರಗೊಳಿಸಿರುತ್ತಾರೆ.

ಎರಡನೇ ದಿನ ಸಾಯಂಕಾಲ ಐದು ಗಂಟೆಗೆ ವೆಂಕಟೇಶ್ವರಸ್ವಾಮಿಯ ರಥೋತ್ಸವ ನಡೆಯುತ್ತದೆ. ಉತ್ಸವದಲ್ಲಿ ಸುತ್ತಮುತ್ತಲಿನ ಜನ ನೆರೆದಿರುತ್ತಾರೆ, ರಥವನ್ನು ಬೆಳಗಿನಿಂದಲೂ ಕಟ್ಟಿ ಬಣ್ಣ ಬಣ್ಣದ ಬೆಲೂನುಗಳನ್ನು ತೇರಿನ ಸುತ್ತಲು, ತೇರಿನ ಮರಕ್ಕೆ ಕಟ್ಟುತ್ತಾರೆ. ತಳಿರು ತೋರಣಗಳಿಂದ ಅಲಂಕಾರ ಮಾಡುತ್ತಾರೆ. ಮಡಿವಾಳ ತಂದ ಶುಭ್ರವಾದ ಬಟ್ಟೆಯಿಂದ ತೇರಿನ ಸಂಪೂರ್ಣ ಭಾಗವನ್ನು ಬಣ್ಣ ಬಣ್ಣದ ಬಟ್ಟೆಯಿಂದ ಅಲಂಕಾರ ಮಾಡುತ್ತಾರೆ. ಸಾಯಂಕಾಲ ಐದು ಗಂಟೆಗೆ ಸ್ವಾಮಿಯ ಮೂರ್ತಿ ಇಟ್ಟು ಮಂಗಳವಾಧ್ಯದ ಸಮೇತ ದೇವಸ್ಥಾನದಿಂದ ತಂದು ರಥದ ಮೇಲೆ ಕೂರಿಸಿ ಅಲಂಕಾರಗೊಳಿಸಿರುತ್ತಾರೆ. ನಂತರ ಮಹಾಮಂಗಳಾರತಿ ನಡೆಯುತ್ತದೆ. ನಾಲ್ಕು ಗಾಲಿಗಳಿಗೂ ವಿಶೇಷವಾಗಿ ತಯಾರಿಸಿದ ಅನ್ನವನ್ನು ಎಡೆಮಾಡುತ್ತಾರೆ, ಬೂದು ಗುಂಬಳಕಾಯಿಯನ್ನು ಹೊಡೆದು ತೇರು ಹಗ್ಗವನ್ನು ಮುಂದೆ ಹಾಕುತ್ತಾರೆ. ದೇವರ ಹೆಸರಿನಲ್ಲಿ ಜಯಕಾರ ಹಾಕುತ್ತ ಕೈಯಲ್ಲಿ ತೇರ ಹಗ್ಗವನ್ನು ಹಿಡಿದು ಉತ್ಸಾಹ, ಕೇಕೆ, ಸಿಳ್ಳುಗಳಿಂದ ತೇರು ಎಳೆಯುತ್ತಾರೆ. ಜನರ ಜಯಕಾರ ಮುಗಿಲು ಮುಟ್ಟುವಂತಿದ್ದು ಭಕ್ತಾಧಿಗಳ ಉತ್ಸಾಹ ಜಾತಿ, ಧರ್ಮ, ಲಿಂಗಭೇದವಿಲ್ಲದೆ ಸ್ವಾಮಿಯ ಸೇವಾ ಕಾರ್ಯದಲ್ಲಿ ಕಾರ್ಯೋನ್ಮುಖರಾಗುವುದು ವಿಶೇಷವಾಗಿದೆ. ಜನಪದರ ಗುಣ ತೇರೆಳೆದ ಹರ್ಷ ಮುಂದಿನ ವರ್ಷದ ತನಕ ಆಯುಸ್ಸು ಗಟ್ಟಿಯಾಗಿರಲೆಂದು ಬಯಕೆ, ಪ್ರಾರ್ಥನೆ ಜನಮನದ ಆಶಯ.

**ಗಾದರಿ ಮಲೆ**

ಚಿನ್ನಹಗರಿ ನದಿ ಪರಿಸರದಲ್ಲಿ ಬರುವ ಧಾರ್ಮಿಕ ಕ್ಷೇತ್ರಗಳಲ್ಲಿ ಗಂಜಿಗಟ್ಟೆ ಒಂದಾಗಿದೆ. ಈ ಕ್ಷೇತ್ರ ಚಿತ್ರದುರ್ಗ ಜಿಲ್ಲೆ ಹೊಳಲ್ಕೆರೆ ತಾಲೂಕಿನಲ್ಲಿದೆ. ಮ್ಯಾಸಬೇಡರ ಸಾಂಸ್ಕೃತಿಕ ವೀರ ಗಾದ್ರಿಪಾಲನಾಯಕನ ನೆಲೆ ಇರುವುದು ಇಲ್ಲಿಯೇ. ದೇವರ ಗಂಜಿಗಟ್ಟೆ ಎಂದು ಪ್ರಸಿದ್ಧಿ ಪಡೆದಿದೆ. ೧೦೧ ಲಿಂಗಗಳನ್ನೊಳಗೊಂಡ ಈ ಗ್ರಾಮ ಧಾರ್ಮಿಕ ಕೇಂದ್ರವಾಗಿದೆ. ಗಾದ್ರಿಪಾಲನಾಯಕ ಇಲ್ಲಿ ಕೇವಲ ಈ ಬುಡಕಟ್ಟಿನವರಿಗೆ ಸೀಮಿತನಾಗದೆ ಎಲ್ಲಾ ಸಮುದಾಯಗಳ ಜನರಿಗೆ ಪೂಜಾರ್ಹನಾಗಿದ್ದಾನೆ. ಸಾಮಾನ್ಯವಾಗಿ ಹಬ್ಬ ಹರಿದಿನಗಳಲ್ಲಿ ಎಲ್ಲಾ ಜಾತಿಯವರು ಒಂದಾಗಿ

ಗಾದ್ರಿಪಾಲನಾಯಕನ ಆಚರಣೆಗಳಲ್ಲಿ ತೊಡಗುವುದನ್ನು ಕಾಣಬಹುದು. ಈ ಬುಡಕಟ್ಟಿನ ದೇವರ ಗುಡಿಗಳು ತಮ್ಮ ವಾಸದ ಗುಡಿಸಲು (ಗುಡ್ಲು) ಗಳಂತೆ ಬಿದಿರು ಹುಲ್ಲುಗಳಿಂದ ನಿರ್ಮಿತವಾಗಿರುವುದನ್ನು ಕಾಣುತ್ತೇವೆ. ಈ ವೀರರ ಗುಡಿಗಳು ಹೆಚ್ಚು ಸಂಖ್ಯೆಯಲ್ಲಿ ಇನ್ನು ಮೂಲ ಸ್ಥಿತಿಯಲ್ಲಿವೆ. ಅನೇಕ ಕಡೆ ಮ್ಯಾಸಬೇಡರ ಹಟ್ಟಿಗಳಲ್ಲಿ ದೇವಾಲಯಗಳು ಇನ್ನು ಮೂಲಸ್ಥಿತಿಯಲ್ಲಿವೆ. ಆಧುನಿಕ ದೇವಾಲಯದ ಕಟ್ಟಡಗಳಿಗಿಂತ ತನ್ನ ಮೂಲ ಬಿದಿರು, ಹುಲ್ಲು, ಕಾಂಸಿ ಗುಡಿಗಳು ಶ್ರೇಷ್ಟವೆಂಬುವುದು ಸಾಂಪ್ರದಾಯಿಕ ಮ್ಯಾಸಬೇಡರ ಅಭಿಪ್ರಾಯವಾಗಿದೆ. ಮಿಂಚೇರಿಯೊಳಗೆ ನದಿ ಪಕ್ಕದಲ್ಲಿ ಒಂದು ವಿಶಾಲವಾದ ಹಾಸು ಬಂಡೆ ಇದೆ. ಇದೇ ಸ್ಥಳದಲ್ಲಿ ಗಾದರಿಪಾಲನಾಯಕ ಮತ್ತು ಹುಲಿ ಹೋರಾಡಿ ಪ್ರಾಣ ಬಿಟ್ಟರು ಎಂದು ಹೇಳುತ್ತಾರೆ. ಅಲ್ಲದೆ ಈ ಬಂಡೆಯೊಳಗೆ ಒಂದು ಕಿಂಡಿ(ಚಿಲುಮೆ) ಇದೆ. ಬೇಸಿಗೆ ಕಾಲದಲ್ಲಿ ದೇವರು ಹೊಳೆಗೆ ಹೋದಾಗ ಪೂಜಿಸುವ ನೀರಿನ ಸಲುವಾಗಿ ಜೋಡು ಉರುಮೆಯನ್ನು ಜೋರಾಗಿ ಬಡಿದಾಗ ನೀರು ಚಿಮ್ಮುತ್ತದೆ. ಆ ನೀರಿನಿಂದಲೇ ಪೂಜೆ ಇತ್ಯಾದಿ ಕಾರ್ಯಗಳನ್ನು ಮಾಡುತ್ತೇವೆ ಎಂದು ಹೇಳುತ್ತಾರೆ.

ಗಾದ್ರಿಪಾಲನಾಯಕನನ್ನು ಇಲ್ಲಿ ಪೂಜಿಸುವವರು ಕಾಮಗೇತಲ ಬೆಡಗಿಗೆ ಸೇರಿದವರು. ಎನುಮಲೋರು ದೇವರನ್ನು ಪೂಜಿಸುವುದಿಲ್ಲ. ದೇವರ ಹತ್ತಿರ ಸಹ ಹೋಗುವುದಿಲ್ಲ. ಅಲ್ಲದೆ ಮಿಂಚೇರಿಯಲ್ಲಿ ಗಾದ್ರಿಪಾಲನಾಯಕ ಗುಡ್ಡೆ ಮತ್ತು ಹಸುವಿನ ಗುಡ್ಡೆಯನ್ನು ಮಾತ್ರ ಪೂಜಿಸುತ್ತಾರೆ. ಹುಲಿಯ ಗುಡ್ಡೆಯನ್ನು ಪೂಜಿಸುವುದಿಲ್ಲ. ಅಲ್ಲದೆ ವಿಶೇಷ ಸಂದರ್ಭಗಳಲ್ಲಿ (ಹಬ್ಬ ಜಾತ್ರೆಗಳಲ್ಲಿ) ಕೆಂಚಪ್ಪ, ಕಾಮಪ್ಪರು ಮಜ್ಜಿಗೆ ಕಡೆಯಲು ಉಪಯೋಗಿಸುತ್ತಿದ್ದ ಮರವನ್ನು ಪೂಜಿಸುತ್ತಾರೆ. ಈ ಮರಕ್ಕೆ ಬೇರೆ ಯಾವುದೇ ಹೆಸರು ಇರುವಂತೆ ಕಾಣುವುದಿಲ್ಲ. ಆದ್ದರಿಂದ ಈ ಮರವನ್ನು 'ಕಡಗಲ್ ಮರ' ಎಂದು ಕರೆಯುತ್ತಾರೆ.[೨]

ಪೂಜಾರಿಯ ನಿಯಮಗಳನ್ನು ಈ ರೀತಿ ಇವೆ ಚಿಕ್ಕ ಬಾಲಕನಿರುವಾಗಲೇ ದೇವರ ಪೂಜಾರಿಗೆ ಪಟ್ಟ ಕಟ್ಟುತ್ತಾರೆ. ಪೂಜಾರಿಯ ಎರಡು ಬೆನ್ನಿನ ಮೇಲೆ ಮುದ್ರೆ ಹಾಕುತ್ತಾರೆ. ಇವನು ವಾಹನಗಳನ್ನು ಹತ್ತುವುದಿಲ್ಲ ಎಷ್ಟು ದೂರ ಹೋದರೂ ಕಾಲು ನಡಿಗೆಯಲ್ಲೇ ಹೋಗಬೇಕು ಹೊರಗಡೆ ಹೋದಂಥ ಸಂದರ್ಭದಲ್ಲಿ ಹೋಟೆಲ್‌ಗಳಲ್ಲಿ ಊಟ ಮಾಡುವಂತಿಲ್ಲ. ಹಣ್ಣು ಹಂಪಲುಗಳನ್ನು ಮಾತ್ರ ಸೇವಿಸಬಹುದು. ಪ್ರತಿ ಸೋಮವಾರ ಮೈಯನ್ನು ತೊಳೆದು(ಮುಟ್ಟು ಮೈಲಿಗೆಯಿಂದ ದೂರಾಗಿ) ಮಡಿ ಬಟ್ಟೆಯನ್ನು ಧರಿಸಿ ದೇವರ ಪೂಜೆಯನ್ನು ಮಾಡಬೇಕು. ಗಾದ್ರಿಪಾಲನಾಯಕನ ಸಂಕೇತವಾಗಿ ಗಂಗೆ ಪೂಜೆಗಾಗಿ ಬಿಲ್ಲನ್ನು ತೆಗೆದುಕೊಂಡು ಹೋಗುವರು ಈ ಬಿಲ್ಲನ್ನು ಹಿಡಿಯುವವರು ಕಾಮಗೇತಲು ಬೆಡಗಿಗೆ ಸೇರಿದವರು.

ಮ್ಯಾಸಬೇಡರು, ಇತರೆ ಬುಡಕಟ್ಟಿನವರು ಆಚರಿಸುವ ಹಬ್ಬಜಾತ್ರೆಗಳನ್ನು ಆಚರಿಸುತ್ತಾರೆ. ಇವರಿಗೆ ಬಹಳ ವಿಶಿಷ್ಟವಾದ ಹಬ್ಬವೆಂದರೆ ಗುಗ್ಗರಿಹಬ್ಬ(ಕಾಳವ್ವನ ಹಬ್ಬ) ಈ ಹಬ್ಬವನ್ನು ಬಹುತೇಕ ಹಟ್ಟಿಗಳಲ್ಲಿ ಆಚರಿಸುತ್ತಾರೆ. ಕಾಡುಗೊಲ್ಲರಲ್ಲಿ ಸಹ ಈ ಹಬ್ಬವನ್ನು ಆಚರಿಸುವುದನ್ನು ಕಾಣಬಹುದು. ಪಶುಪಾಲನೆಯ ಜೊತೆಗೆ ವ್ಯವಸಾಯವೂ ಇವರಿಗೆ ವೃತ್ತಿಯಾಗಿದೆ. ವ್ಯವಸಾಯದಲ್ಲಿ ತೊಡಗಿದ ಇವರು ತಮ್ಮ ಹೊಲದಲ್ಲಿ ಹುರುಳಿ, ಹೆಸರು ಮುಂತಾದ ದ್ವಿದಳ ಧಾನ್ಯಗಳನ್ನು ಬೆಳೆಯುತ್ತಾರೆ( ಬಹುತೇಕ ಗುಗ್ಗರಿಗಾಗಿ ಬಳಸುವದು ಹುರುಳಿಕಾಳನ್ನು)ಹಬ್ಬ ಆಗುವವರೆಗೂ ಕಾಳನ್ನು ಮನೆಗಾಗಿ ಬಳಸುವಂತಿಲ್ಲ. ಹಬ್ಬದ ಕೆಲವು ಪ್ರಮುಖ ಕಾರ್ಯಕ್ರಮಗಳು ಈ ರೀತಿ ಇವೆ.

೧. ಹಬ್ಬದ ದಿನದಂದು ಎಲ್ಲಾ ಜಾತಿಯ ಜನರು ತಾವು ಬೆಳೆದ ಧಾನ್ಯಗಳನ್ನು ದೇವಸ್ಥಾನದ ಮುಂಭಾಗದಲ್ಲಿ ಕೂಡಿಹಾಕುತ್ತಾರೆ.

೨. ಭಕ್ತಾಧಿಗಳಲ್ಲಿ ಮೀಸಲನ್ನು ಮೊದಲು ಹಾಕುವಲ್ಲಿ ಒಂದು ನಿರ್ದಿಷ್ಟವಾದ ಮನೆತನಗಳನ್ನು ಕ್ರಮವಾಗಿ ಮೀಸಲನ್ನು ಹಾಕುತ್ತಾರೆ,

ಮೊದಲನೆಯದು–ಮಲ್ಲಜ್ಜಿಯವರು

ಎರಡನೆಯವರು – ಪುಡಕನಳ್ಳಿಯವರು

ಮೂರನೆಯವರು– ದುರ್ಗದವರು

ನಾಲ್ಕನೆಯವರು–ಶ್ಯಾಗಲೆಯವರು

ಐದನೆಯವರು–ಬಾಡದವರು

ಆರನೆಯವರು–ಕುರ್ಕೆಯವರು

ಈ ಮನೆತನದ ಮೊದಲು ಮೀಸಲು ಹಾಕಿದ ನಂತರ ಉಳಿದವರು ಹಾಕುತ್ತಾರೆ.

೩. ದೇವಸ್ಥಾನದಲ್ಲಿಯೇ ಒಲೆಗುಂಡು ಹೂಡಿ ಗುಗ್ಗರಿಯನ್ನು ಬೇಯಿಸುತ್ತಾರೆ

೪. ರಾತ್ರಿಯಲ್ಲಾ ಭಜನೆ ಮಾಡುತ್ತಾರೆ.

೫. ಸೂರ್ಯನ ಉದಯದ ನಂತರ ದೇವರಿಗೆ ಗುಗ್ಗರಿಯ ಎಡೆ ಹಾಕಿ ಪೂಜಿಸುತ್ತಾರೆ. ಪೂಜೆಯ ನಂತರ ಗುಗ್ಗರಿಯನ್ನು ಪ್ರಸಾದವೆಂದು ಭಾವಿಸಿ ತಿನ್ನುವುದನ್ನು ಕಾಣುತ್ತೇವೆ.

ಜಾತ್ರೆಯ ಸಂದರ್ಭದಲ್ಲಿ ಗಾದ್ರಿದೇವರನ್ನು ಗಂಗೆ ಪೂಜೆಗಾಗಿ ಹೊಳೆಗೆ ಕರೆದುಕೊಂಡು ಹೊಗುತ್ತಾರೆ. ಪ್ರತಿಯೊಂದು ಹಬ್ಬ ಜಾತ್ರೆಗಳ ಸಂದರ್ಭದಲ್ಲಿ ಈ ಆಚರಣೆ ನಡೆಯುತ್ತದೆ.

ಗಂಜಿಗಟ್ಟೆಯಲ್ಲಿ ಗಾದ್ರಿಪಾಲನಾಯಕನೊಂದಿಗೆ ನರಸಿಂಹಸ್ವಾಮಿ ದೇವರೂ ಸಹ ಜೊತೆಗೂಡಿ ಹೊಳೆ ಪೂಜೆಗೆ ಹೋಗುವುದನ್ನು ಕಾಣಬಹುದು. ಗಾದ್ರಿ ಪಾಲನಾಯಕನ ಸಂಕೇತವಾಗಿ ಬಿಲ್ಲನ್ನು ಹಿಡಿದುಕೊಂಡು ಅದನ್ನು ಹೂವಿನಿಂದ ಸಿಂಗರಿಸಿಕೊಂಡು ಉರುಮೆಯೊಂದಿಗೆ ಭಕ್ತ ಸಮೂಹ ದೇವಸ್ಥಾನದಿಂದ ಹೊರಟು ಮಿಂಚೇರಿ ಹಳ್ಳಕ್ಕೆ ಬಂದು ಅಲ್ಲಿ ಮರಳಿನ ಮೇಲೆ ಕಂಬಳಿಯನ್ನು ಹಾಸಿ ಅದರ ಮೇಲೆ ಗಾದ್ರಿದೇವರು ಮತ್ತು ನರಸಿಂಹಸ್ವಾಮಿ ದೇವರನ್ನು ಕೂರಿಸುತ್ತಾರೆ. ಜೊತೆಗೆ ತಂದ ಎಲ್ಲಾ ಪೂಜೆ ಸಾಮಾಗ್ರಿಗಳನ್ನು ಅದರ ಬಳಿ ಇಡುತ್ತಾರೆ. ಉರುಮೆಯನ್ನು ಬಡಿದಾಗ ದೇವರ ಸಮ್ಮುಖದಲ್ಲೆ ಚಿಲುಮೆ (ವರ್ತಿ)ಯಿಂದ ಬಂದ ನೀರನ್ನು ದೇವರ ಮೇಲೆ ಹಾಕಿ ಎಲ್ಲಾ ನೀತಿ ನಿಯಮಗಳೊಂದಿಗೆ ಕ್ರಮಬದ್ದವಾಗಿ ಪೂಜಿಸುತ್ತಾರೆ. ನಂತರ ಎಲ್ಲಾ ದೇವರುಗಳೂ ಜೊತೆಗೂಡಿ ಗ್ರಾಮಕ್ಕೆ ಮರಳುತ್ತವೆ. ಉರುಮೆಯ ಶಬ್ದ ಕೇಳಿ  ಜನರು ಕೇಕೆ ಹಾಕುತ್ತಾ ಕುಣಿಯುತ್ತಾರೆ. ಜೊತೆಗೆ ಭೂತಪ್ಪಗಳನ್ನು ಹಿಡಿದು ಒಬ್ಬರಿಗಿನ್ನ ಒಬ್ಬರು ಹುಮ್ಮಸ್ಸಿನಿಂದ ಚೆನ್ನಾಗಿ ಕುಣಿಯುತ್ತಾರೆ. 'ಮಣೇವು' ಹಾಕುವುದನ್ನು ವಿಜೃಂಭಣೆಯಿಂದ ದೇವತೆಗಳು ಭಕ್ತಿ ಸಮೂಹದೊಂದಿಗೆ ಮರಳುತ್ತವೆ. ದೇವರುಗಳು ಊರಿನ ಹತ್ತಿರ ಬಂದಾಗ ರೋಗಿಗಳು, ದೆವ್ವ ಹಿಡಿದವರು, ಹರಕೆ ಹೊತ್ತವರು ತೊಯ್ದ ಬಟ್ಟೆಯಲ್ಲಿ ದೇವರ ಮುಂದೆ ಅಡ್ಡ ಬೀಳುತ್ತಾರೆ. ಆಗ ದೇವರನ್ನು ಹೊತ್ತ ಪೂಜಾರಿ ಅವರ ಮೈ ಮೇಲೆ ನಡೆಯುತ್ತಾನೆ. ಇವರಿಂದ ಅವರಿಗೆ ಬಂದ ಕಷ್ಟಗಳು ದೂರವಾಗುತ್ತವೆ ಎಂಬ ನಂಬಿಕೆ ಇದೆ. ಹೀಗೆ ಗಂಜಿಗಟ್ಟೆ ಗ್ರಾಮದಲ್ಲಿ ಕೇವಲ ಈ ಬುಡ್ಡಕಟ್ಟಿನವರಿಗೆ ಮಾತ್ರ ಸೀಮತವಾಗಿಲ್ಲ. ಎಲ್ಲಾ ಸಮುದಾಯದವರು ಕೂಡಿ ಆಚರಿಸುತ್ತಾರೆ. ಇದರಿಂದ ಎಲ್ಲರನ್ನು ಒಟ್ಟು ಗೂಡಿಸುವ  ಹಬ್ಬವಾಗಿದೆ.

ಗಾದ್ರಿಪಾಲನಾಯಕನ ದೊಡ್ಡ ಜಾತ್ರೆಯನ್ನು ಗಂಜಿಗಟ್ಟೆಯ ಸುತ್ತಮುತ್ತಲಿನ ಜನರು ಸೇರಿ ಮೀಂಚೇರಿ ಅರಣ್ಯದಲ್ಲಿ ಪ್ರತಿ ಐದು ವರ್ಷಗಳಿಗೊಮ್ಮೆ ನೆರವೇರಿಸುತ್ತಾರೆ. ಮೀಂಚೇರಿ ಸುತ್ತಮುತ್ತಲಿನ ಸಮಸ್ತ ಜನತೆ ಗಂಜಿಗಟ್ಟೆ ಗ್ರಾಮದಲ್ಲಿ ಪಂಚಾಯ್ತಿ ಸೇರಿ ಜಾತ್ರೆಯನ್ನು ನಡೆಸುವುದರ ಬಗ್ಗೆ ಆಲೋಚಿಸಿ ಒಮ್ಮತದಿಂದ ತೀರ್ಮಾನವನ್ನು ತೆಗೆದುಕೊಳ್ಳುತ್ತಾರೆ. ಈ ಜಾತ್ರೆಯಲ್ಲಿ ಭಾಗವಹಿಸಿ ತಮ್ಮ ಕೆಲಸ ಕಾರ್ಯಗಳನ್ನು ಮಾಡುತ್ತಾರೆ.

ಅಲ್ಲದೆ ಈ ಜಾತ್ರೆಗೆ ಚಿತ್ರದುರ್ಗ,ಚಳ್ಳಕೆರೆ, ಜಗಳೂರು, ಕೂಡ್ಲಿಗಿ ತಾಲೂಕಿನ ಇನ್ನು ಮುಂತಾದ ಅನೇಕ ಪ್ರದೇಶಗಳಿಂದ ಜನರು ಎತ್ತಿನ ಬಂಡಿಗಳೊಂದಿಗೆ ಮಿಂಚೇರಿ ಅರಣ್ಯಕ್ಕೆ ಬರುತ್ತಾರೆ. ಒಂದು ವಾರ ಅಂದರೆ ಜಾತ್ರೆ ಮುಗಿಯುವವರಿಗೂ ಇಲ್ಲಿದ್ದು ಪರುವು ಮಾಡುವುದನ್ನು ಕಾಣುತ್ತೇವೆ. ಅಲ್ಲದೆ ಅವರಿಗೆ ವಿಶಿಷ್ಟವಾದ ಕೆಲವು ಆಚರಣೆಗಳಿರುವುದನ್ನು ಕಾಣುತ್ತೇವೆ.

ಜಾತ್ರೆಯ ಮೊದಲನೆಯ ದಿನ ಜಾಂಡ್ಯ ಧ್ವಜ ಏರಿಸುವುದು ಸುಮಾರು ೧೦೦ ಅಡಿ ಎತ್ತರವಿರುವ ಬಿದಿರಿನ ಗಳಕ್ಕೆ, ಜಾತ್ರೆಯ ಸಂಕೇತ ಸೂಚಿತವಾದ ಬಟ್ಟೆಯನ್ನು ಗಳದ (ಬಿದಿರಿನ

ಬೊಂಬಿನ) ತುದಿಗೆ ಕಟ್ಟಿರುತ್ತಾರೆ. ಈ ಬಾವುಟ ಸುತ್ತಮುತ್ತಲಿನ ಊರಿನ ಜನರಿಗೆ ಕಾಣುತ್ತದೆ, ಎರಡನೆಯದಿನ ಮಿಂಚೇರಿಯಲ್ಲಿ ಗಾದ್ರಿಪಾಲನಾಯಕನ ಕಲ್ಲು ಗುಡ್ಡೆಗೆ (ಸಮಾಧಿ)ಹಸುವಿನ ಗುಡ್ಡೆಗೆ, ಕಡಾಲ ಮರಕ್ಕೆ ಹಾಗೂ ಹಾಸುಬಂಡೆಯ ಮೇಲಿರುವ ಪಾದಗಳಿಗೆ ವಿಶೇಷವಾಗಿ ಪೂಜಿಸುತ್ತಾರೆ.ಬಂದಂತಹ ಭಕ್ತರು ಎಡೆಯನ್ನು ಕೊಡುತ್ತಾರೆ. ಮೂರನೆಯ ದಿನ ಗಂಜಿಗಟ್ಟೆಯಿಂದ ಗಾದ್ರಿದೇವರು ಮೀಂಚೇರಿ ಅರಣ್ಯಕ್ಕೆ ಹೋಗುವುದನ್ನು ಕಾಣುತ್ತೇವೆ.ಅಲ್ಲಿ ನೇಮನಿಷ್ಠೆಗಳಿಂದ ಗಾದ್ರಿಪಾಲನಾಯಕನನ್ನು ಪೂಜಿಸುತ್ತಾರೆ. ನಂತರ ಗಂಜಿಗಟ್ಟೆಗೆ ಮರಳಿ ಬರುವಾಗ ಉಡಿಗೆರೆ ಅಂದನೂರು ಮಾರ್ಗವಾಗಿ ಬರುತ್ತದೆ. ಅಲ್ಲಿನ ಭಕ್ತರು ಗಾದ್ರಿಪಾಲನಾಯಕನಿಗೆ ವಿಶೇಷವಾಗಿ ಪೂಜೆ ಸಲ್ಲಿಸುತ್ತಾರೆ. ನಂತರ ಗಂಜಿಗಟ್ಟೆ ಹತ್ತಿರವಿರುವ ಬನ್ನಿ ಮರದ ಹತ್ತಿರ ಬಂದು ಈ ದೇವರು ಕುಳಿತುಕೊಳ್ಳುತ್ತದೆ. ಅಲ್ಲಿ ಹೊಳೆ ಪೂಜೆ ಮುಗಿಸಿಕೊಂಡು ಬೆಳಗಿನ ಜಾವಕ್ಕೆ ಗಂಜಿಗಟ್ಟೆಯ ನರಸಿಂಹಸ್ವಾಮಿ ಗುಡಿಯ ಮುಂಭಾಗದಲ್ಲಿ ದೊಡ್ಡ ಎಡೆಯು ಮುಗಿದ ನಂತರ ದೇವರು ಗುಡಿ ತುಂಬುತ್ತದೆ.

ಹುಲಿಹೋತದ ಸೇವೆ ಎಲ್ಲಾ ಆಚರಣೆಗಳಿಗಿಂತ ಬಹಳ ಪ್ರಮುಖವಾದದ್ದು. ಇದರಲ್ಲಿ ಗಾದ್ರಿಪಾಲನಾಯಕನು ಹುಲಿಯನ್ನು ಕೊಂದ ಘಟನೆಯನ್ನು ಅಭಿನಯಿಸುವುದರ ಮೂಲಕ ಅದನ್ನು ಪುನಃ ನೆನಪಿಗೆ ತಂದುಕೊಳ್ಳುತ್ತಾರೆ. ಪೂಜಾರಿಯೇ ಅಥವಾ ಗಾದ್ರಿಪಾಲನಾಯಕನ ಬೆಡಗಿಗೆ ಸೇರಿದವರೋ ಕರಿಯ ಕಂಬಳಿಯನ್ನು ಹೊದ್ದು ಪಾಲಯ್ಯನ ವೇಷ ಧರಿಸುವನು. ಒಂದು ಕುರಿ ಅಥವಾ ಹೋತಕ್ಕೆ ಹುಲಿಯ ವೇಷ ತೊಡಗಿಸಲಾಗುವುದು ವೇಷ ತೊಟ್ಟ ಪಾಲನಾಯಕ ಆ ಹುಲಿಯ ವೇಷದ ಕುರಿ ಅಥವಾ ಹೋತದೊಂದಿಗೆ ಹೋರಾಡಿದಂತೆ ಮಾಡಿ, ಕೊನೆಗೆ, ಅದರ ಎದೆಯನ್ನು ಕತ್ತಿಯಿಂದ ಸೀಳುತ್ತಾನೆ. ಈ ಕುರಿಯ ಮಾಂಸವನ್ನು ಎನುಮಲೋರು ಬೆಡಗಿನವರು ಮಾತ್ರ ಸೇವಿಸುತ್ತಾರೆ.

ಈ ಜಾತ್ರೆಯಲ್ಲಿ ನನ್ನಿವಾಳದ ಮತ್ತು ಬಚ್ಚುಬೋರಯ್ಯನಹಟ್ಟಿಯ ಮ್ಯಾಸಬೇಡರ ಪಾತ್ರ ಬಹಳ ಪ್ರಮುಖವಾದದ್ದು ಮುತ್ತಯ್ಯಗಳೊಂದಿಗೆ (ದೇವರದನಗಳು)ಬೇಟೆಯ ಸಮೇತವಾಗಿ ಮಿಂಚೇರಿಯ ಅರಣ್ಯಕ್ಕೆ ಬಂದು, ಈ ಜಾತ್ರೆಯು ಮುಗಿಯುವವರೆಗೂ ಇದ್ದು, ತಮ್ಮದೆ ಆದ ಕೆಲವು ಆಚರಣೆಗಳನ್ನು ಆಚರಿಸುತ್ತಾರೆ. ಎತ್ತಿನ ಕಿಲಾರಿಗಳ, ಪೂಜಾರಿಗಳ, ದಾಸಯ್ಯಗಳ ಪಾತ್ರ ಈ ಜಾತ್ರೆಯಲ್ಲಿ ವಿಶಿಷ್ಟವಾಗಿದೆ. ಕ್ರಮಬದ್ದವಾಗಿ ಕಟ್ಟುನಿಟ್ಟಾಗಿ ನೀತಿ ನಿಯಮಗಳನ್ನು ತೀರಿಸುತ್ತಾರೆ. ನನ್ನಿವಾಳದ ದೊರೆಗಳು ಈ ಜಾತ್ರೆಗೆ ಬರುವುದಿಲ್ಲ ಎಂದು ಹೇಳುತ್ತಾರೆ. ಏಕೆಂದರೆ ಈ ದೊರೆಗಳು ಗಾದ್ರಿಪಾಲನಾಯಕನ ಸ್ವರೂಪವಾಗಿ ಇರುವರು. ಇದರಿಂದ ಗಾದ್ರಿಪಾಲನಾಯಕನಿಗೆ ಬಂದಂತಹ ಗತಿ ನಮಗೂ ಬರಬಹುದು ಎನ್ನುವ ಭಯದಿಂದ ದೊರೆಗಳು ಪ್ರವೇಶಿಸುವುದಿಲ್ಲ ಎಂದು ಹೇಳುತ್ತಾರೆ.

ಈ ಜನರು ತಮಗೆ ಇಚ್ಛಾನುಸಾರವಾದ ಮೀಸಲನ್ನು ದೇವರಿಗೆ ಒಪ್ಪಿಸುತ್ತಾರೆ. ಮಾಂಸದ ಎಡೆಯನ್ನು ಹಾಕುತ್ತಾರೆ. ಒಟ್ಟಾರೆ ಇವರು ಗಾದ್ರಿ ಪಾಲನಾಯಕನ ಸಂಕೇತವಾಗಿ ಬಿಲ್ಲನು (ಬಿಲ್ಲು ನಾಗರ ಹಾವಿನ ಸ್ವರೂಪ ಇರುತ್ತದೆ. ಇದಕ್ಕೆ ಬೆಳ್ಳಿ ಕಟ್ಟನ್ನು ಕಟ್ಟಿರುತ್ತಾರೆ) ಪ್ರತಿ ಜಾತ್ರೆಗೂ ಬರುವುದನ್ನು ಕಾಣಬಹುದು.

ಗಾದ್ರಿಪಾಲನಾಯಕನನ್ನು ಕುರಿತು ಅನೇಕ ಕತೆ,ದಂತಕತೆ, ಐತಿಹ್ಯ, ಜನಪದ, ಕಥನ ಗೀತೆಗಳು ಹುಟ್ಟಿಕೊಂಡಿವೆ. ಅವುಗಳಲ್ಲಿ

"ಗಾದ್ರಿ ಪಾಲನಾಯಕ ಗಂಗೆ ಪೂಜೆಗೆ ಹೊಳೆಗೆ ಹೋದಾಗ
ಕೆಂದಗಣ್ಣೀನಯ್ಯ ಗಂಗೀ ಗೋಗಿ ಬರುವಾಗ
ಗಂಭೀರ ಕಾಣಿ ಮಡಿದಾಳ- - - - - ಚಳ್ಳಕೆರೆಯ
ಗಂಭೀಯ ಸೀರೆ ನಡಮುಡಿಯಾಸ್ಯಾನು
ಉತ್ತಮಕಾಣಿ ಮಡಿದಾಳ ಚಳ್ಳಕೆರೆಯ
ಪಟ್ಟೆ ಸೀರೆ ನಡ ಮುಡಿ------ಪಾಲಯ್ಯ
ಪಟ್ಟೇದ ಮ್ಯಾಲೆ ನಡುದಾಗ"[೩]

ಗಾದ್ರಿಪಾಲಯ್ಯ ಗಂಗೆ ಪೂಜೆಯಿಂದ ಬರುವಾಗ ಇಡೀ ಪ್ರಕೃತಿಯೇ ಸ್ವಾಗತಿಸುತ್ತದೆ ಎನ್ನುವ ರೀತಿಯಲ್ಲಿ ಈ ಗೀತೆಯಲ್ಲಿ ಅಡಕವಾಗಿದೆ.

"ನಲ್ಲಾನುಬರುವಾಗ ಚಲ್ಯಾರೆ ಮಲ್ಲೀಗೆ
ಆತ ಪಾಲಯ್ಯ ಬರುವಾಗ ಚಳ್ಳಕೆರೆ
ತೋಪೆಲ್ಲಾ ಮಂಜು ಕವಿದಾವು."

ಹೀಗೆ ಪಾಲಯ್ಯನನ್ನು ಕುರಿತು ಅನೇಕ ಜನಪದ ಗೀತೆಗಳು ಇರುವುದನ್ನು ಕಾಣುತ್ತೇವೆ.[೪] ಹಬ್ಬ ಜಾತ್ರೆಯ ಸಂದರ್ಭದಲ್ಲಿ ಹೆಣ್ಣು ಮಕ್ಕಳು ಈತನ ಬಗ್ಗೆ ಸೋಭಾನೆ ಹಾಡು ಹೇಳುತ್ತಾರೆ.

**ಚಿಪ್ಪಿನಕೆರೆ**

ಚಿತ್ರದುರ್ಗ ತಾಲೂಕಿನ ಮುದ್ದಾಪುರ ಗ್ರಾಮ ಪಂಚಾಯ್ತಿ ವ್ಯಾಪ್ತಿಗೊಳಪಡುವ ಗ್ರಾಮ. ಮುದ್ದಾಪುರದಿಂದ ಒಂದು ಮೈಲಿ ಕೆರೆ ಕೋಡಿ ಹಳ್ಳವನ್ನು ದಾಟಿ ಅಥವಾ ಕಾತ್ರಾಳು ಬಿಳಿ ಜನಗೆಹಳ್ಳವನ್ನು ದಾಟಿಕೊಂಡು ಹೋಗಬಹುದು. "ಮಳೆಗಾಲದಲ್ಲಿ ಸುತ್ತಲಿನ ಈ ಹಳ್ಳಗಳು ತುಂಬಿದರೆ ದೀಪದಂತೆ ಆಗಿ ಇಲ್ಲಿಂದ ಎಲ್ಲಿಗೂ ಹೋಗಲು ಸಾಧ್ಯವಿಲ್ಲದ ಊರು. ಆದ್ದರಿಂದಲ್ಲೇ ಚಿಪ್ಪಿನಕೆರೆ(ಚಿಪ್ಪಿನೊಳಗೆ ಹುದುಗಿಕೊಂಡು) ಎಂದು ಹೆಸರಾಗಿರಬಹುದು."[೫]

ಯುಗಾದಿ ಹಬ್ಬದ ನಂತರ ಹದಿನೈದು ದಿನಕ್ಕೆ ಆಂಜನೇಯ ಸ್ವಾಮಿಯ"ಉಚ್ಚಯ್ಯ"ವನ್ನು ಮಾಡುತ್ತಾರೆ. ಈ ಉಚ್ಚಯ್ಯ(ಉತ್ಸವ) ಆದ ಮೂರನೇ ದಿನ 'ಭೂತಪ್ಪ' ದೇವರನ್ನು ಕುಣಿಸುತ್ತಾರೆ.ಆಗ ವಿಶೇಷವಾಗಿ ದೇವರಿಗೆ ಬೆಲ್ಲ ಮತ್ತು ಬಾಳೆ ಹಣ್ಣು ಮಾತ್ರ ಎಡೆ ಹಾಕುತ್ತಾರೆ.

ಗ್ರಾಮ ದೇವತೆ ಉಡಿಸಲಮ್ಮನ ಹಳೆ ಗುಡಿಯನ್ನು ಈಗ ಜೀರ್ಣೋದ್ದಾರ ಮಾಡಿದ್ದಾರೆ. ಊರಿಗೆ ಮೈಲಿದೂರದಲ್ಲಿ ಗುಡ್ಡದ ಮೇಲೆ ಗುಹೇಶ್ವರನ ಗುಡಿ ಇದ್ದು ಶ್ರಾವಣದ ಕೊನೆಯ ಸೋಮವಾರ ಸುತ್ತಮುತ್ತಲಿನ ವಿಶೇಷ ಪೂಜೆ ಸಲ್ಲಿಸುತ್ತಾರೆ. ಯಾವ ಕಾಲದಲ್ಲೋ ಯುದ್ದ ಸಮಯದಲ್ಲಿ ಬಂದು ಇಲ್ಲಿ ಮರಾಠರು ಹುಲಿಗೇಶ್ವರಿ ಗುಡಿಯಲ್ಲಿ ಮೊದಲು ಪವಾಡ ನಡೆಯುತ್ತದೆ.

**ಕಲ್ಲೇದೇವರಪುರ**

ಜಗಳೂರಿನಿಂದ ೨೦ ಕಿ.ಮೀ.ದೂರದಲ್ಲಿರುವ ಕಲ್ಲೇದೇವರಪುರ ಗ್ರಾಮವೂ ತಾಲ್ಲೂಕಿನ ಪ್ರಸಿದ್ಧ ಐತಿಹಾಸಿಕ ಮತ್ತು ಧಾರ್ಮಿಕ ಕ್ಷೇತ್ರಗಳಲ್ಲೊಂದು. ಇದು ಗುಹೇಶ್ವರ ಬೆಟ್ಟಶ್ರೇಣಿಯ ಪರಿಸರದಲ್ಲಿ ನೆಲೆಗೊಂಡಿದೆ. ಪ್ರಾಗೈತಿಹಾಸ ಹಾಗೂ ಇತಿಹಾಸ ಕಾಲದ ಅನೇಕ ನೆಲೆಗಳ ಜೀವಸೆಲೆಯಾದ ಜನಗಿಹಳ್ಳವು ಗ್ರಾಮದ ಪಶ್ಚಿಮ ದಿಕ್ಕಿನಲ್ಲಿ ಹರಿಯುತ್ತದೆ. ಪ್ರಸ್ತುತ ಗ್ರಾಮವೂ ಕಲ್ಲೇಶ್ವರ ದೇವರಿಂದ 'ಕಲ್ಲೇದೇವಾಪುರ' ಎಂಬ ಹೆಸರು ಪಡೆದಿದೆ.

ಗ್ರಾಮದಲ್ಲಿ ಕಲ್ಲೇಶ್ವರ, ತ್ರಿಕೂಟಲಿಂಗೇಶ್ವರರ ದೇವಾಲಯಗಳು ಪ್ರಮುಖವಾಗಿದ್ದು, ಶಾಸನಗಳು, ವೀರಗಲ್ಲುಗಳು ಈ ಸ್ಥಳದಲ್ಲಿ ದೊರತಿವೆ. ಈ ಪ್ರದೇಶದಲ್ಲಿ ಪ್ರತಿವರ್ಷ ಏಪ್ರಿಲ್ ತಿಂಗಳಿನಲ್ಲಿ ಕಲ್ಲೇಶ್ವರ ಜಾತ್ರೆ ನಡೆಯುತ್ತದೆ. ಇದು ಐತಿಹಾಸಿಕವಾಗಿ ಪ್ರಸಿದ್ಧಿ ಪಡೆದು ನಾಡಿನ ಅನೇಕ ಭಕ್ತಾಧಿಗಳನ್ನು ಒಂದುಗೂಡಿಸುತ್ತದೆ. ಕಲ್ಲೇಶ್ವರ ಜಾತ್ರೆಯ ವಿಶೇಷ ಆಚರಣೆಗಳೆಂದರೆ ಮೊದಲನೇದಿನ ಜಾತ್ರೆ ಆರಂಭವಾಗುವ ಮೊದಲನೇ ದಿನದಂದು ಕಲ್ಲೇಶ್ವರ ಸ್ವಾಮಿಗೆ ವಿಶೇಷ ಪೂಜೆ ನೆರವೇರಿಸಲಾಗುತ್ತದೆ. ಅಂದು ಊರಿನ ೯ ಜನ ಮುತ್ತೈದೆ ಸ್ತ್ರೀಯರು ಮಡಿಯುಟ್ಟು ಶ್ರೀ ಕಲ್ಲೇಶ್ವರ ಸ್ವಾಮಿಗೆ ಹಾಗೂ ಗೌರಮ್ಮನಿಗೆ ಕಂಕಣಧಾರಣೆಯನ್ನು ಮಾಡುತ್ತಾರೆ. ಇದು ಜಾತ್ರೆಯ ಸಾಂಕೇತಿಕ ಮುನ್ಸೂಚನೆಯಾಗಿದ್ದು. ಜಾತ್ರೆಯ ಆರಂಭಕ್ಕೆ ನಾಂದಿಯಾಗುತ್ತದೆ.

ಕಂಕಣ ಧಾರಣೆಯಾದ ಮೂರನೇಯ ದಿನದಂದು ಶ್ರೀ ಕಲ್ಲೇಶ್ವರ ಸ್ವಾಮಿಗೆ ಅಭಿಷೇಕ ಮತ್ತು ವಿಶೇಷ ಪೂಜೆ ಇರುತ್ತದೆ. ಅದಾದನಂತರ ದೇವರಿಗೆ ಮದಲಿಂಗಶಾಸ್ತ್ರ ಮಾಡುತ್ತಾರೆ. ಆನಂತರದಲ್ಲಿ 'ಗಜೋತ್ಸವ' ಮಾಡುತ್ತಾರೆ. ಅಂದರೆ ದೇವರ ಉತ್ಸವ ಮೂರ್ತಿಯನ್ನು ಗಜದ ಮೇಲೆ ಕೂರಿಸಲಾಗುತ್ತದೆ.

ಅದೇ ದಿನ ಕಲ್ಲೇಶ್ವರನ ವಾಹನವಾಗಿ ನಿಲ್ಲುವುದು. ಅಶ್ವದ ಮೇಲೆ ಸ್ವಾಮಿಯ ಉತ್ಸವ ಮೂರ್ತಿಯನ್ನು ಕೂರಿಸಿ ಪೂಜಿಸಲಾಗುತ್ತದೆ.

ಜಾತ್ರೆ ಪ್ರಾರಂಭವಾದ ನಾಲ್ಕನೇ ದಿನದಂದು ಕಲ್ಲೇಶ್ವರ ಸ್ವಾಮಿಗೆ ವೃಷಭೋತ್ಸವ ಅಲಂಕಾರ ಮಾಡಲಾಗುತ್ತದೆ.

ಐದನೇದಿನ ಕಲ್ಲೇಶ್ವರ ರಥೋತ್ಸವ ಬಹು ವಿಜೃಂಭಣೆಯಿಂದ ನಡೆಯುತ್ತದೆ. ಅಂದು ಬೆಳಿಗ್ಗೆ ಕಲ್ಲೇಶ್ವರ ಸ್ವಾಮಿಗೆ ವಿಶೇಷವಾಗಿ ಅಭಿಷೇಕ ಹಾಗೂ ಪೂಜೆಯನ್ನು ಮಾಡಲಾಗುತ್ತದೆ.

ಅಂದು ದೇವರಿಗೆ ಜಮಾಪುರದಿಂದ ಎಡೆ ತರಲಾಗುತ್ತದೆ. ಇದು ಮೊದಲಿನಿಂದಲೂ ಬಂದಂತಹ ಪದ್ದತಿಯಾಗಿದೆ. ಅಂದು ಸ್ವಾಮಿಯ ಉತ್ಸವ ಮೂರ್ತಿಯ ದೇವಾಲಯದ ಹತ್ತಿರಕ್ಕೆ ಕರೆತರಲಾಗುತ್ತದೆ. ಅಲ್ಲಿ ದೇವರಿಗೆ ವಿಶೇಷ ಪೂಜೆ ಮತ್ತು ಮಂಗಳಾರತಿ ಮಾಡಲಾಗುತ್ತದೆ. ಅಲ್ಲಿಂದ ಬಂದು ಉತ್ಸವಮೂರ್ತಿ ತೇರನ್ನು ಏರುತ್ತದೆ. ಜಾತ್ರೆಯ ದಿನದಂದು ಮೂಲನಕ್ಷತ್ರದಲ್ಲಿ ರಥವನ್ನು ಎಳೆಯುವುದು ಇಲ್ಲಿನ ವೈಶಿಷ್ಠತೆಯಾಗಿದೆ. ಮೂಲಸ್ಥಾನದಿಂದ ಹೊರಟ ರಥವು ಹುಚ್ಚಪ್ಪಯ್ಯನ ಗದ್ದಿಗೆ ಹತ್ತಿರ ಹೋಗುತ್ತದೆ. ಆಗ ಪೂಜಾರಿಗಳು ಹುಚ್ಚಪ್ಪಯ್ಯನ ಗದ್ದಿಗೆ ಮತ್ತು ಗುಗ್ಗುರಿ ಬಸವಣ್ಣನ ದೇವಾಲಯಕ್ಕೆ ಬಂದು ದೀಪ ಹಚ್ಚಿ ಪೂಜಿಸಿ ಪುನಃ ರಥವೇರುತ್ತಾರೆ. ಆನಂತರ ರಥವನ್ನು ಪುನಃ ಹಿಂದಕ್ಕೆ ಎಳೆದು ಮೂಲಸ್ಥಾನದಲ್ಲಿ ನಿಲ್ಲಿಸಲಾಗುತ್ತದೆ. ರಥದಿಂದ ಉತ್ಸವ ಮೂರ್ತಿಯನ್ನು ಅಡ್ಡಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಮೆರವಣಿಗೆಯ ಮೂಲಕವಾಗಿ ದೇವಾಲಯದ ಆವರಣದಲ್ಲಿನ ತೂಗುಯ್ಯಾಲೆಯ ಹತ್ತಿರಕ್ಕೆ ತಂದು ಅದರಲ್ಲಿ ಕೂರಿಸಲಾಗುತ್ತದೆ. ಆಗ ಮಕ್ಕಳಿಲ್ಲದ ಸ್ತ್ರೀಯರು ಅದನ್ನು ೩ ಬಾರಿ ತೂಗಿದರೆ ಮಕ್ಕಳಾಗುತ್ತವೆಂಬುದು ಸ್ಥಳೀಯರ ಪ್ರತೀತಿ. ಆನಂತರ ಕೋಲಾಟ ಹಾಕುತ್ತಾ ಸ್ವಾಮಿಯ ಸ್ತುತಿಯ ಹಾಡನ್ನು ಹೇಳುತ್ತಾರೆ.

ಆರನೇಯ ದಿನ ಅಡ್ಡಪಲ್ಲಕ್ಕಿಯ ಉತ್ಸವ ಈ ದಿನದ ವಿಶೇಷವಾಗಿದೆ. ಅಡ್ಡಪಲ್ಲಕ್ಕಿಯಲ್ಲಿ ಉತ್ಸವ ಮೂರ್ತಿಯನ್ನು ಕೂರಿಸಿಕೊಂಡು ಮೆರವಣೆಗೆಯ ಮೂಲಕ ರಥದ ಬಳಿಗೆ ಹೋಗಿ ರಥವನ್ನು ಪೂಜಿಸಿ ಪುನಃ ದೇವರನ್ನು ಕರೆತಂದು ತೂಗುಯ್ಯಾಲೆಯಲ್ಲಿ ಕೂರಿಸಲಾಗುತ್ತದೆ. ಅಂದು ಸಹ ದೇವರ ಪದಗಳನ್ನು ಹಾಡುತ್ತಾ ಕೋಲಾಟ ಹಾಕಲಾಗುತ್ತದೆ.

ಇದಾದ ನಂತರ ಅಂದು ಓಕಳಿ ನಡೆಯುತ್ತದೆ. ದೊಡ್ಡ ಹಂಡೆಗಳಲ್ಲಿ ಓಕಳಿ ನೀರನ್ನು ತಯಾರಿಸಿ ಸ್ವಲ್ಪ ನೀರನ್ನು ದೇವರಿಗೆ ಎರಚಿ ಉಳಿದ ನೀರನ್ನು ಊರಿನ ಯುವಕರು ಮಾತ್ರ ಎರಚಾಡುತ್ತಾರೆ. ಆನಂತರ ಮೂರ್ತಿಯನ್ನು ಗಂಗೆಪೂಜೆಗಾಗಿ ಜನಿಗೆಹಳ್ಳಕ್ಕೆ ಕರೆದೊಯ್ಯುತ್ತಾರೆ. ಅಲ್ಲಿ ಗಂಗೆ ಪೂಜೆ ಪೂರ್ಣಗೊಳಿಸಿ ಕರೆತಂದ ಸ್ವಾಮಿಯನ್ನು ತೂಗುಯ್ಯಾಲೆಯಲ್ಲಿ ಕೂರಿಸಿ ಪೂಜೆಗೈಯುತ್ತಾರೆ. ಆನಂತರ ದೇವರಗುಡಿ ತುಂಬಿಸಲಾಗುತ್ತದೆ. ಇಲ್ಲಿಗೆ ಜಾತ್ರೆಯು ಮುಗಿಯುತ್ತದೆ.

**ತೇರು ಅಥವಾ ರಥ**

ಶ್ರೀ ಕಲ್ಲೇಶ್ವರ ಸ್ವಾಮಿಯ ತೇರನ್ನು ಯುಗಾದಿಯ ಹಬ್ಬದಲ್ಲಿ ತೇರಿನ ಮನೆಯಿಂದ ಹೊರ ಎಳೆಯುತ್ತಾರೆ. ಇದು ಕಲ್ಲಿನ ಗಾಲಿ ಹೊಂದಿದ್ದು ಇದು ಮರದಿಂದ ತಯಾರಿಸಿದ್ದಾಗಿದೆ. ಇದರಲ್ಲಿ

ಶಿವಪಾರ್ವತಿ, ವಿಷ್ಣುಶ್ರೀದೇವಿ, ಭೂದೇವಿ ಅವನ ಅವತಾರಗಳು,ಆಂಜನೇಯ ಗಣೇಶ,ಮಿಥುನಶಿಲ್ಪ, ನಂದಿ, ಹಸು, ಕುದುರೆ. ಹಂಸ, ಸಿಂಹ, ಮಿಥುನ ಶಿಲ್ಪಗಳಿವೆ.ಇದಕ್ಕೆ ಕಲ್ಲಿನ ಗಾಲಿಗಳಿವೆ.

ರಥೋತ್ಸವ ದಿನದಂದು ರಥಕ್ಕೆ ವಿವಿಧ ಅಲಂಕಾರ ಮಾಡಿ ಗಾಲಿಗೆ ಎಣ್ಣೆ ಬಳಿಯುತ್ತಾರೆ. ಅಂದು ತೇರಿಗೆ ಪೂಜಾರಿಗಳ ಮನೆಯಿಂದ ಜೋಗಳ್ಳಯವರ ಮನೆಯಿಂದ ಎಡೆತಂದು ದೊಳೆಡೆ ಮತ್ತು ಗಾಲಿ ಎಡೆ ಎಂಬ ಎರಡು ಎಡೆ ಹಾಕುತ್ತಾರೆ. ಆನಂತರ ರಥದ ಮೊದಲ ಪೂಜೆಯು ಹುಚ್ಚಪ್ಪಜ್ಜನ ವಂಶದವರಿಂದ ನಡೆಯುತ್ತದೆ. ಆನಂತರ ತೆರಿಗೆ ಕಾಯಿಯನ್ನು ಹೊಡೆಯುತ್ತಾರೆ. ತೇರಿನ ದೂಳೆಡೆಯನ್ನು ಊರಿನ ನಾಯಕ ಸಮುದಾಯದವರು ಗಾಲಿ ಎಡೆಯನ್ನು ಮಡಿವಾಳರು ಮತ್ತು ತಳವಾರರು ಹಂಚಿಕೊಳ್ಳುವ ಪದ್ದತಿ ಇದೆ. ತೇರು ಹರಿಯುವಾಗ ಬಾಳೆಹಣ್ಣು, ಮೆಣುಸು, ಮಂಡಕ್ಕಿ, ಬೆಲ್ಲವನ್ನು ಎಸೆಯುವಂತಹ ಆಚರಣೆ ಇದೆ.

**ಕಲ್ಲೇಶ್ವರ ಸ್ವಾಮಿಯ ವಿಶೇಷ ಪೂಜೆಗಳು**

ಶ್ರಾವಣ ಮಾಸದಲ್ಲಿ ಕಲ್ಲೇಶ್ವರ ದೇವರಿಗೆ ಒಂದು ತಿಂಗಳಕಾಲ ಬೆಳಿಗ್ಗೆ ರುದ್ರಾಭಿಷೇಕವಿರುತ್ತದೆ. ಈ ಮಾಸದ ಮೊದಲ ಪೂಜೆಯನ್ನು ಪೂಜಾರ ಮನೆತನದವರು ಒಟ್ಟುಗೂಡಿಸುತ್ತಾರೆ. ಶ್ರಾವಣ ಮಾಸದ ಮೂರನೇ ವಾರದಲ್ಲಿ ಸ್ವಾಮಿಯ ತ್ರಿಶೂಲ, ಬೆತ್ತ, ಪಾದರಕ್ಷೆಗಳನ್ನು ತೆಗೆದುಕೊಂಡು ಗುಹೇಶ್ವರ ಬೆಟ್ಟಕ್ಕೆ ಹೋಗಿ ಪೂಜೆಮಾಡಿ ವಾಪಸ್ಸು ತರುತ್ತಾರೆ.

ಕಾರ್ತಿಕ ಮಾಸದಲ್ಲಿ ದೀಪೋತ್ಸವ ಇರುತ್ತದೆ. ಆ ಮಾಸದ ಕೊನೆಯ ಸೋಮವಾರದಂದು ಹಿಟ್ಟಿನ ಹುಣ್ಣಿಮೆ ಮಾಡುತ್ತಾರೆ. ಅಂದರೆ ನವಣಕ್ಕಿಯ ಹಿಟ್ಟನ್ನು ಕುಟ್ಟುತ್ತಾರೆ. ಅಂದು ಊರಿನ ಮಲ್ಲಮ್ಮ ಎಂಬುವಳು ಸ್ವಾಮಿಯ ನೈವೇದ್ಯಕ್ಕೆ ಇಟ್ಟಿದ ಹಿಟ್ಟನ್ನು ತಿಂದಿದ್ದುರಿಂದ ಈ ನಂಬಿಕೆ ಸಂಕೇತವಾಗಿ ಹಬ್ಬವನ್ನು ಆಚರಿಸುತ್ತಾರೆ. ಅಂದು ನವಣಕ್ಕಿ ಹಿಟ್ಟಿನಲ್ಲಿ ದೀಪಮಾಡಿ ತುಪ್ಪದ ದೀಪ ಹಚ್ಚುತ್ತಾರೆ. ಆನಂತರ ಉಳಿದ ಹಿಟ್ಟನ್ನು ಭಕ್ತಾಧಿಗಳಿಗೆ ಹಂಚುತ್ತಾರೆ.

ವಿಜಯದಶಮಿಯಲ್ಲಿ ಕಲ್ಲೇಶ್ವರಸ್ವಾಮಿಯನ್ನು ಅಡ್ಡಪಲ್ಲಕ್ಕಿಯಲ್ಲಿ ಕೂರಿಸಿಕೊಂಡು ಅಳಳ್ಳಿ ಬಸವಣ್ಣನ ದೇವಾಲಯದ ಹತ್ತಿರಕ್ಕೆ ಕರೆದೊಯ್ಯುತ್ತಾರೆ. ಅಲ್ಲಿ ದೇವರು ಬನ್ನಿ ಮುಡಿದು ವಾಪಸ್ಸು ಬಂದು ಗುಡಿತುಂಬುತ್ತದೆ.

**ಗುಗ್ಗರಿ ಹುಣ್ಣೆಮೆ**

ಫೆಬ್ರವರಿ ತಿಂಗಳ ಕಾಳ ಹುಣ್ಣಿಮೆಯಲ್ಲಿ ಊರಿನ ಜನರಿಂದ ಐದು ವಿಧದ ಧಾನ್ಯ ಸಂಗ್ರಹಿಸಿ ಅವನ್ನು ಬೇಯಿಸಿ ಗ್ರಾಮದ ಉತ್ತರ ದಿಕ್ಕಿನ ಗುಗ್ಗರಿ ಬಸವಣ್ಣನ ದೇವಾಲಯಕ್ಕೆ ತಂದು ರಾಶಿ ಹಾಕುತ್ತಾರೆ. ಆಗ ಕಲ್ಲೇಶ್ವರ ಸ್ವಾಮಿಯ ಉತ್ಸವ ಮೂರ್ತಿಯನ್ನು ಪಲ್ಲಕ್ಕಿಯಲ್ಲಿ

ಹೊತ್ತು ಅಲ್ಲಿಗೆ ತಂದು ಕೂರಿಸಿ ಪೂಜಿಸುತ್ತಾರೆ. ಆನಂತರ ಗುಗ್ಗರಿಯನ್ನು ಊರ ಜನರಿಗೆ ಹಂಚುತ್ತಾರೆ.

**ಮುಷ್ಟೂರು**

ಜಗಳೂರು ತಾಲ್ಲೂಕಿನಲ್ಲಿ ಬರುವ ಗ್ರಾಮ. ಮುಷ್ಟೂರು ಮಠದಿಂದ ಇಡೀ ಜಿಲ್ಲೆಯಲ್ಲೇ ಪ್ರಸಿದ್ಧಿಯಾದ ಐತಿಹಾಸಿಕ ಸ್ಥಳ. ಹಿಂದೆ ಇದಕ್ಕೆ ಮುಟ್ಟುಪುರ ಅಥವಾ ಮುತ್ತುತೀಯನ ಊರು ಎಂದು ಹೆಸರಿತ್ತು. ಇಲ್ಲಿ ಕಲ್ಲೇಶ್ವರ ಸ್ವಾಮಿಯ ದೇವಾಲಯವಿದೆ. ಕ್ರಿ.ಶ.೯೩೦ ಕಾಲದಲ್ಲಿ ನೊಳಂಬವಾಡಿ ರಾಜ ಅಯ್ಯಪ್ಪದೇವನು ನೊಳಂಬವಾಡಿಯೊಂದಿಗೆ ಇನ್ನು ಅನೇಕ ಪ್ರದೇಶಗಳನ್ನು ಆಳುತ್ತಿದ್ದನೆಂದು ಕಲ್ಲೇಶ್ವರ ದೇವಾಲಯದ ಶಾಸನದಿಂದ ತಿಳಿದುಬರುತ್ತದೆ. ಹಾಗೂ ಜವನಯ್ಯನಮಗ ನಾಥವರ್ಮನೆಂಬುವನು ಜೀರ್ಣೋದ್ಧಾರ ಮಾಡಿದನೆಂದು ತಿಳಿದುಬರುತ್ತದೆ.

ಇಲ್ಲಿರುವ ಹುಚ್ಚಲಿಂಗೇಶ್ವರ ಸ್ವಾಮಿಗಳ ಮಠ ಪುರಾತನವಾದದ್ದು. ಈ ಮಠದ ಮೂಲಸ್ವಾಮಿಗಳು ಆಂಧ್ರದ ಕಡೆಯಿಂದ ಬಂದಂತಹ ಹುಚ್ಚಲಿಂಗಸ್ವಾಮಿಗಳು. ಇವರು ಪವಾಡ ಪುರುಷರಾಗಿದ್ದು, ಓಂಕಾರ ಸ್ವರೂಪಿಗಳಾಗಿ ತ್ಯಾಜ್ಯರು. ಇವರ ಸಮಾಧಿ ಇಲ್ಲಿಯೇ ಇದೆ. ವಿಶೇಷವೆಂದರೆ ಈ ಗದ್ದುಗೆಗಳ ಬಳಿ ಸ್ತ್ರೀಯರಿಗೆ ಪ್ರವೇಶ ನಿಷಿದ್ದ ಮತ್ತು ಈ ಮಠದ ಸ್ವಾಮಿಗಳ ಹೆಸರಿನ ಜೊತೆ ಹುಚ್ಚ ಎನ್ನುವ ಅಭಿನಾಮವೂ ಸೇರುತ್ತದೆ. ಇವರು ಪವಾಡ ಪುರುಷರಾಗಿದ್ದರೂ ಎನ್ನಲು ಒಂದು ಕತೆ ಇದೆ. ಶ್ರೀ ಹುಚ್ಚಲಿಂಗೇಶ್ವರ ಸಾಮಿಗಳು ಒಂದು ದಿನ ದುರ್ಗದ ಅರಮನೆಯ ಅಂತಃಪುರದಲ್ಲಿ ಕಾಣಿಸಿದಾಗ ಕೋಪಗೊಂಡ ಪಾಳೆಯಗಾರರು ಇವರನ್ನು ಕಂಠಮಟ್ಟಕ್ಕೆ ಮಣ್ಣಿನಲ್ಲಿ ಜೀವಂತ ಹೂಳಿಸಿ ಅರಮನೆಗೆ ಬಂದು ನೋಡಿದಾಗ ಸ್ವಾಮಿಗಳು ಅಂತಃಪುರದಲ್ಲೇ ಇದ್ದರಂತೆ, ಇವರು ಪವಾಡ ಪುರುಷರೆಂದು ಮನಗಂಡ ಪಾಳೆಯಗಾರರು ಭಕ್ತಿಯಿಂದ ಮಠ ಕಟ್ಟಿಸಿಕೊಟ್ಟರಂತೆ. ದಂಡಿನ ಕುರುಬರಹಟ್ಟಿಯಲ್ಲಿ ಇವರ ಮೂಲ ಮಠವಿದೆ. ಕಲ್ಲೇದೇವರಪುರ,ದೊಣೆಹಳ್ಳಿ, ಅಣಜಿ, ಹರಪ್ಪನಹಳ್ಳಿ, ಕುರಿಮಗಾನಹಳ್ಳಿ, ಚಿಟ್ನಿಹಳ್ಳಿ ಮುಂತಾದ ಕಡೆ ಶಾಖಾಮಠಗಳಿವೆ. ಈ ಮಠ ವೀರಶೈವ ಧರ್ಮವನ್ನು , ಅದ್ವೈತವನ್ನು ಭೋದಿಸುತ್ತದೆ. ಈ ಮಠ ದಾಸೋಹಮಠವಾಗಿದ್ದು, ವಿದ್ಯಾರ್ಥಿಗಳಿಗಾಗಿ ಶಾಲೆ ವಸತಿ ನಿಲಯಗಳನ್ನು ನಡೆಸುತ್ತಿದೆ. ಶ್ರಾವಣ ಮತ್ತು ಶಿವರಾತ್ರಿಯಲ್ಲಿ ಮಠದಲ್ಲಿ ಪುರಾಣ ಪ್ರವಚನಗಳು ನಡೆಯುತ್ತವೆ.

**ಪೂಜಾರಹಳ್ಳಿ**

ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ ತಾಲ್ಲೂಕಿನ ಕಾನಾಹೊಸಹಳ್ಳಿ ಹೋಬಳಿಗೆ ಸೇರಿದ ಪೂಜಾರಹಳ್ಳಿ ಎಂಬ ಗ್ರಾಮದ ಕೆ.ಬಿ. ಹಟ್ಟಿಯಲ್ಲಿ ಬಸವಣ್ಣನ ದೇವಾಲಯವಿದೆ.ಈ ಗ್ರಾಮದ ಪ್ರಧಾನ ದೇವರು ಬಸವಣ್ಣ." ಈದೇವರಿಗೆ ಬಸಣ್ಣ,ಬಸವಣ್ಣ, ಕಲ್ಯಾಣ ಬಸವಣ್ಣ ಮತ್ತು ಗುರುಕರಿಬಸವೇಶ್ವರ

ಎಂದೆಲ್ಲ ಕರೆಯುತ್ತಾರೆ. ಈ ಭಾಗದಲ್ಲಿ ಇದು ಎಷ್ಟು ಪ್ರಸಿದ್ಧಿಯೆಂದರೆ ಹುಣ್ಣಿಮೆ, ಅಮವಾಸ್ಯೆ, ಸೋಮವಾರದಂದು ಭಕ್ತಾದಿಗಳ ಜನಜಂಗುಳಿ ನೆರೆದಿರುತ್ತದೆ. ಕೂಡಲ ಸಂಗಮದಂತೆ ಅಲ್ಲವಾದರೂ ಇರುವುದರಲ್ಲಿಯೇ ತೃಪ್ತಿಪಟ್ಟುಕೊಳ್ಳುವಷ್ಟು ಭಕ್ತರಿರುತ್ತಾರೆ."[೨] ಪಶುಪಾಲನೆಯಲ್ಲಿದ್ದ ಮ್ಯಾಸನಾಯಕರಿಗೆ ಗೂಳಿ,ಬಸವ ಆರಾಧ್ಯ ದೈವ. ಹಾಗಾಗಿ ನಂದಿಯನ್ನು ಬಸವಣ್ಣನೆಂದು ಪೂಜಿಸುವುದು ವಾಡಿಕೆ. ಬಸವೇಶ್ವರನ ಕಲ್ಯಾಣದ ಪ್ರತಿರೂಪದಂತೆ ಪೂಜಾರಿಹಳ್ಳಿ ಧಾರ್ಮಿಕ ಕ್ಷೇತ್ರ ಈ ಭಾಗದಲ್ಲಿ ಜನಪ್ರಿಯಗೊಂಡರೂ ಮತ್ತು ಬುಡಕಟ್ಟು ಸಮುದಾಯದ ಸಂಪಿಧಾನದ ಪರಿಧಿಯಲ್ಲಿ ಬೆಳಕಿಗೆ ಬರಲು ಕಾತರಿಸುತ್ತಿದೆ. ಈ ಗ್ರಾಮ ಪಿಶಾಲವಾದ ಪ್ರದೇಶ,ನದಿ ಕಾಲುವೆಗಳಿಲ್ಲದಿದ್ದರೂ ಭಕ್ತವೃಂದ ಸ್ನಾನಕ್ಕೆ ಕೆರೆ,ಹಳ್ಳ,ಬಾವಿಗಳನ್ನು ಅವಲಂಬಿಸುತ್ತಾರೆ. ಪ್ರತಿವರ್ಷ ಪಿಜೃಂಭಣೆಯಿಂದ ಜರುಗುವ ದಸರಾಹಬ್ಬ ಅಥವಾ ಬನ್ನಿ ಮುಡಿಯುವ ಹಬ್ಬವನ್ನು ವೈಶಿಷ್ಟ್ಯ ಪೂರ್ಣವಾಗಿ ಮಾಡುತ್ತಾರೆ. ಬುಡಕಟ್ಟು ಸಮುದಾಯಕ್ಕೆ ಒಲಿದ ದೇವರು ಇದಾಗಿದ್ದರೂ. ಧಾರ್ಮಿಕ ಹಬ್ಬ, ಆಚರಣೆಗಳಲ್ಲಿ ಎಲ್ಲ ಜನ ವರ್ಗಗಳಿಗೆ ಬಹುಪ್ರಿಯವಾದ ಸಮಾನವಾಗಿ ಭಾಗವಹಿಸಿ ಬೆರಗುಗೊಳಿಸುತ್ತಾರೆ. ಭಕ್ತರು ಯಾವುದೇ ಅಂಜಿಕೆ ಅಳುಕು ಇಲ್ಲದೆ ತಮ್ಮ ವೃತ್ತಿ ಯಶಸ್ವಿಯಾಗಿ ಮಾಡುತ್ತಾರೆ. ಕರ್ನಾಟಕ ಮತ್ತು ಆಂಧ್ರಪ್ರದೇಶದಿಂದ ಸಹಸ್ರಾರು ಭಕ್ತರು ಇಲ್ಲಿಗೆ ಧಾವಿಸುವುದು ವಾಡಿಕೆ. ಇವರು ಉದಾರವಾಗಿ ದಾನ ಕಾರ್ಯಗಳನ್ನು ಮಾಡಿ ದೇವಾಲಯದ ಕಟ್ಟಡ ಅಭಿವೃದ್ದಿಗೆ ಸಾಕಷ್ಟು ಮಂದಿ ಶ್ರಮಿಸಿದ್ದಾರೆ. ಇಂದು ಚಿತ್ರದುರ್ಗ ಜಿಲ್ಲೆಯ ಎಲ್ಲಾ ತಾಲ್ಲೂಕುಗಳಿಂದ ಮತ್ತು ನೆರೆಯ ಆಂಧ್ರದ ಅನಂತಪುರ, ಕಡಪ, ಕರ್ನೂಲುಗಳಲ್ಲದೆ,ಕರ್ನಾಟಕ ರಾಯಚೂರು, ಧಾರವಾಡ, ದಾವಣಗೆರೆ, ಶಿವಮೊಗ್ಗ ಮುಂತಾದ ಕಡೆಗಳಿಂದ ಭಕ್ತಾಧಿಗಳು ಇಲ್ಲಿಗೆ ಆಗಮಿಸುತ್ತಾರೆ. ಸ್ಥಳೀಯವಾಗಿ ಮೊಳಕಾಲ್ಮೂರು, ಚಳ್ಳಕೆರೆ, ನಾಯಕನಹಟ್ಟಿ, ಹೊಸಹಳ್ಳಿ,ಚಿಕ್ಕಜೋಗಿಹಳ್ಳಿ ಮತ್ತಿತರ ನೆರೆಯ ಗ್ರಾಮಗಳವರು ಹಬ್ಬಗಳೆಂದು ಧಾವಿಸುತ್ತಾರೆ.

**ಕಂಪಳದೇವರ ಹಟ್ಟಿ (ಚಿಕ್ಕುಂತಿ)**

ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನಲ್ಲಿರುವ ಕಂಪಳದೇವರಹಟ್ಟಿ ಮಹಾಕ್ಷೇತ್ರವು ಚಿನ್ನಹಗರಿ ನದಿಬಲದಂಡೆಯ ಮೇಲಿದೆ. ಪ್ರಾಚೀನ ಮ್ಯಾಸಬೇಡರ ನೆಲೆಯಾದ ಇಲ್ಲಿ ಶಿಲಾಯುಗದ ನೆಲೆಗಳು ಮಾನವಾಕೃತಿ ಕಲ್ಲುಗಳು ಮುಖ್ಯವೆನಿಸಿವೆ. ಸ್ಥಳೀಯರು ತಮ್ಮ ಪವಿತ್ರಭಾವನೆಗಳನ್ನು ಆಧ್ಯಾತ್ಮಿಕವಾಗಿ ಹಂಚಿಕೊಂಡಿದ್ದಾರೆ.ಇದಕ್ಕೆ ಚಿಕ್ಕುಂತಿ ಎಂಬ ಮತ್ತೊಂದು ಹೆಸರಿದೆ.

ನಾಯಕರು ಮೂಲ ನೆಲೆಯಾದ ಕಂಪಳ ಕ್ಷೇತ್ರ ಕರ್ನಾಟಕದ ತಿರುಪತಿಯಿದ್ದಂತೆ. ವೈಷ್ಣವ ಸಂಪ್ರದಾಯದ ಮಹಾಕ್ಷೇತ್ರಗಳಲ್ಲಿ ಇದು ಒಂದು."[೯] ಶ್ರೀಕೃಷ್ಣ ಇಲ್ಲಿ ಬೇಡರನ್ನು ಬೇಟೆಯಿಂದ ಸ್ಥಿತ್ಯಂತರ ಗೊಳಿಸಿದ್ದನಂತೆ. ಪ್ರಾಣಿ ಹಿಂಸೆಗೆ ಪಿದಾಯ ಹೇಳಿದ ಬೇಡರಿಗೆ ಇದು ವರದಾನವಾದ

ನೆಲೆ. ಶ್ರೀಕೃಷ್ಣನ ಸಂಹಾರವಾಗುವವರೆಗೆ ಒಂದು ಪಂಗಡದಲ್ಲಿದ್ದ ಬೇಡರು ಮತ್ತು ಗೊಲ್ಲರೆಂದು ಇಬ್ಭಾಗವಾದಂತೆ. ಇಲ್ಲಿ ಸಾಂಸ್ಕೃತಿಕ ಸಂಘರ್ಷ ನಡೆದು ಬೇಟೆಯ ಬೇಡ, ಬೇಟೆ ತೊರೆದು ಪಶುಪಾಲನೆ ಕೈಗೊಂಡಿದ್ದು, ಗೊಲ್ಲರು ಗೋಪಾಲಕರಾಗಿ ಮುಂದುವರೆದದ್ದೂ ಮೇಲಿನ ಘಟನೆ ದೃಢೀಕರಿಸುತ್ತದೆ. ಅಂದಿನಿಂದ ಬೇಡರು ಬೇಟೆ ಪ್ರಾಣಿ ಹಿಂಸೆ ಕೈ ಬಿಟ್ಟು ಮಾನವ ಕುಲದ ಒಳತಿಗಾಗಿ ಶ್ರಮಿಸಲು ಕರೆನೀಡಿ ಗೋಪಾಲನೆ ಮಾಡಲು ೧೨ ಸಾಲಿಗ್ರಾಮ ಕೊಳಲು ಮುತ್ತಿನಗಜ್ಜೆ (ಮುತ್ತಿನ ಕಾಲ್ಪೆಂಡೆ)ಗಳನ್ನು ಕೊಟ್ಟಿದ್ದರು. ವರ್ಷಕ್ಕೆ ಎರಡು ಮೂರುಬಾರಿ ಗುಗ್ಗರಿಹಬ್ಬ, ದೀಪಾವಳಿ ಮೊದಲಾದವು ಜರುಗುತ್ತವೆ. ತೀರಾ ಕಟ್ಟುನಿಟ್ಟಿನ ಹಬ್ಬ ಆಚರಣೆಗಳನ್ನು ಕರಿನಾರು ಬೆಡಗಿನವರು ಮಾಡಿಕೊಂಡು ಬಂದಿದ್ದಾರೆ. ಇಂಥ ಸಂಪ್ರದಾಯಗಳನ್ನು ನಾಯಕ ಯಾಜಮಾನರು ರೂಢಿಸಿಕೊಂಡು ಬಂದಿರುವರು. ಬೇಡರು ಆಂಧ್ರದಿಂದ ವಲಸೆ( ತಿರುಪತಿ) ಬಂದು ನೆಲೆಸಿದ್ದೂ ಇಲ್ಲಿಯೇ. ನಂತರ ಆನೆಗೊಂದಿ, ಕಂಪಲಿ, ಎಕ್ಕೆಗೊಂದಿ, ಚಿತ್ರದುರ್ಗ, ನಾಯಕನಹಟ್ಟಿಗಳ ಕಡೆ ಚದುರಿದರು. ಇಲ್ಲಿ ಕಂಪಳರಂಗ, ಗಾದರಿಪಾಲನಾಯಕ, ಪಾಪನಾಯಕ ದೇವರುಗಳ ದೇವರೆತ್ತುಗಳು ಹಾಗೂ ದೇವಾಲಯಗಳಿದ್ದು, ಅನೇಕ ಆಚರಣೆಗಳಿದ್ದವು. ಸಂಸ್ಕೃತಿಯ ಮೂಲಕ ರಾಷ್ಟ್ರೀಯ ಐಕ್ಯತೆಯನ್ನು ಸಾಧಿಸಲು ಬೇಡರು ಆಗಾಗ ಇಲ್ಲಿ ಸೌಹಾರ್ದಯುತ ಕಾರ್ಯಕ್ರಮಗಳನ್ನು ಮಾಡುತ್ತಾರೆ.

**ಸಿದ್ದಯ್ಯನಕೋಟೆ**

ಈ ಗ್ರಾಮಕ್ಕೆ ಸಿದ್ದಯ್ಯನಕೋಟೆ ಎಂಬ ಹೆಸರು ಬರಲು ಸಿದ್ದಯ್ಯ ಎಂಬ ವ್ಯಕ್ತಿ ಇಲ್ಲಿ ಕೋಟೆ ನಿರ್ಮಿಸಿರುತ್ತಾನೆ. ಈಗಲೂ ಅವಶೇಷಗಳಾಗಿ ಊರಿನ ಸುತ್ತಲೂ ಕೋಟೆ ಕೊತ್ತಲು ಬುರುಜು ಇರುವುದು ಕಂಡುಬರುತ್ತದೆ.

ಸಿದ್ದಯ್ಯನಕೋಟೆ ಗ್ರಾಮ ಚಿನ್ನಹಗರಿನದಿಯ ಬಲ ದಂಡೆಯಲ್ಲಿದೆ. ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನ ಗಡಿಯ ಗ್ರಾಮ. ಈ ಗ್ರಾಮದಲ್ಲಿ ಇಳಕಲ್ಲಿನ ಶಾಖಾಮಠ ಚಿತ್ತರಗಿ ವಿಜಯ ಮಹಾಂತೇಶ್ವರ ಶಾಖಾಮಠ ಇದೆ. ಇದು ರಾಜ್ಯದಲ್ಲಿಯೇ ಪ್ರಸಿದ್ದ ಪಡೆದಿದೆ. ಮಠದ ಸ್ವಾಮಿಜಿಗಳಾದ ಶ್ರೀ.ನಿ.ಪ್ರ.ಬಸವಲಿಂಗ ಮಹಾಸ್ವಾಮಿಗಳು ಹಲವು ಸಾಮಾಜಿಕ ಪರಿವರ್ತನೆಗೆ ಶ್ರಮಿಸುತ್ತಿದ್ದಾರೆ. ಪಾದಯಾತ್ರೆ, ಬಲಿದಾನವನ್ನು ತಡೆಯುವುದು, ಜನರಲ್ಲಿ ಪ್ರಜ್ಞೆ ಮೂಡಿಸುವ ಕಾರ್ಯಗಳನ್ನು ನಡೆಸುತ್ತಾ ಬಂದಿದ್ದಾರೆ.

ಶಿವರಾತ್ರಿ ಸಂದರ್ಭದಲ್ಲಿ ಶರಣ ಸಂಸ್ಕೃತಿ ಉತ್ಸವ ನಡೆಯುತ್ತದೆ. ಇದು ಸುಮಾರು ೧೦ ದಿನಗಳ ಕಾಲ ನಡೆಯುತ್ತದೆ. ವಿವಿಧ ವರ್ಗಗಳಿಂದ ಸಾಂಸ್ಕೃತಿಕ ಕಾರ್ಯಕ್ರಮಗಳು ಮತ್ತು ಕ್ರೀಡೆಗಳನ್ನು ಆಯೋಜಿಸಿ ಅಂತಿಮ ದಿನ ಬಹುಮಾನ ನೀಡುತ್ತಾರೆ.

ಶರಣ ಸಂಸ್ಕೃತಿ ಉತ್ಸವದಲ್ಲಿ ನಾಡಿನ ಪ್ರಸಿದ್ದ ಕವಿಗಳನ್ನು ರಾಜಕಾರಣಿಗಳನ್ನು ವಿದ್ವಾಂಸರನ್ನು ಇಲ್ಲಿಗೆ ಕರೆಯಿಸಿ ಉಪನ್ಯಾಸ ಕೊಡಿಸುತ್ತಾರೆ. ೨೦೦೭ ನೇ ವರ್ಷದಲ್ಲಿ ದಲಿತ ಕವಿ ಸಿದ್ದಲಿಂಗಯ್ಯನವರನ್ನು ಕರೆಯಿಸಿ ಪ್ರವಚನಕೊಡಿಸಲಾಯಿತು ಹಾಗೂ ಚಿತ್ತರಗಿ ವಿಜಯಮಹಾಂತೇಶ್ವರ ಪ್ರಶಸ್ತಿ ನೀಡಲಾಯಿತು. ವಿದ್ಯಾರ್ಥಿಗಳಿಗೆ ಶಾಲೆ ಆರಂಭಿಸಿದ್ದಾರೆ. ಸರಳವಿವಾಹ, ಪ್ರವಚನ,ಸತ್ಕಾರ, ಸಮಾರಂಭಗಳು ಆಗಾಗ ಜರುಗುತ್ತವೆ.

ಈ ಮಠ ಆರ್ಥಿಕವಾಗಿ ಸಾಕಷ್ಟು ಮೂಲಗಳನ್ನು ಹೊಂದಿಲ್ಲ. ದಾನಿಗಳಿಂದಲೇ ಈ ಮಠ ನಡೆಯುತ್ತಿದೆ ಸ್ವಾಮಿಗಳು ಪರಿಶ್ರಮದಿಂದ ವಿದ್ಯಾರ್ಥಿಗಳಿಗೆ ಶಿಕ್ಷಣ ಕೊಡುವ ವ್ಯವಸ್ಥೆ ಇದೆ ದಾಸೋಹವೂ ನಡೆಯುತ್ತದೆ.

**ನುಂಕೆಮಲೆ**

ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ತಾಲ್ಲೂಕಿನ ಪ್ರಸಿದ್ಧ ಗಿರಿಧಾಮ ನುಂಕೆಮಲೆ. ಇದು ಸಮುದ್ರ ಮಟ್ಟದಿಂದ ೯೨೧ ಮೀಟರ್ ಎತ್ತರವಾಗಿದೆ. ಇದನ್ನು ನುಂಕಪ್ಪನ ಗುಡ್ಡವೆಂತಲೂ ಕರೆಯುತ್ತಾರೆ.[೧೦] ನುಂಕೇಮಲೆ ಸಿದ್ದೇಶ್ವರ, ತುಪ್ಪದಮ್ಮ, ಮಲ್ಲಿಕಾರ್ಜುನ, ಹರಳಯ್ಯ, ಆಂಜನೇಯ, ಬಸವಣ್ಣ,ಗೋರಕ್ಷನಾಥ,ನುಂಕಮ್ಮ,ಮಲಿಯಮ್ಮ ಮುಂತಾದ ದೇವಾಲಯಗಳಿವೆ.

ನಾಥಪಂಥದ ದಾಖಲೆಗಳಲ್ಲಿ ನುಂಕೆಮಲೆ ಮಠವನ್ನು ಕಾಲಭೈರವ ಮಂದಿರ,ಲೋಕಿಮಠ ಎಂದು ಕರೆದಿದೆ. ಸ್ಥಳೀಯರಿಗೆ ಇದು ನುಂಕೆಮಲೆ ಅಥವಾ ನುಂಕೆಮಲೆ ಇಲ್ಲಿರುವ ಭೈರವನು ಲುಂಕಪ್ಪ ಅಥವಾ ನುಂಕಪ್ಪ/ಲೋಕಿ ಅಥವಾ ಲುಂಕೆ ಶಬ್ದವು ಹೇಗೆ ಬಂದಿತ್ತು? ವಜ್ರಯಾನ ಪಂಥದ ಅಲೋಕಿತನಾಗಿದ್ದ ಊರು ಲೊಕ್ಕಿ ಗುಂಡಿ ಆದಂತೆ, ಲೋಕಿಮಲೆ, ಲೋಕಿಮಠ ಆಗಿರಬಹುದು.[೧೧] ಈ ಪರಿಸರದಲ್ಲಿ ಅಶೋಕನ ಶಾಸನವಿರುವ ಬ್ರಹ್ಮಗಿರಿ-ಸಿದ್ದಾಪುರಗಳಿವೆ. ಆದರೆ ಆಗಿದ್ದದು ಹೀನಯಾನ ಕದ್ರಿ ವಜ್ರಯಾನದ ತಾಣವಾಗಿದ್ದು ನಾಥವಾಗಿ ಬದಲಾದಂತೆ ಇಲ್ಲಿ ಆಗಿರುವುದಕ್ಕೆ ಸಾಕ್ಷಿ ಕುರುಹು ಕಾಣುವುದಿಲ್ಲ. ಆದರೆ ಪರಿಸರದಲ್ಲಿ ಲೋಕ>ಲೋಕಿ ಹೆಸರಿನಿಂದ ಆರಂಭವಾಗುವ ಊರುಗಳಿವೆ. ಆದರೆ ಇವುಗಳ ಆಧಾರದಲ್ಲಿ ಏನನ್ನು ಹೇಳುವುದು ಕಷ್ಟ. ಪ್ರಾಚೀನ ದಾಖಲೆಗಳಲ್ಲಿ ಲುಂಕೆಮಲೆಯನ್ನು ದೇವರಬೆಟ್ಟವೆಂದೂ, ದೇವರಗುಡ್ಡವೆಂದೂ,ತ್ರಿಕೂಟಚಲವೆಂದೂ, ಹೀರಾರ ಬೆಟ್ಟವೆಂದೂ ಕರೆದಿದೆ. ದೇವರ ಎಂಬ ಶಬ್ದವು ಭೈರವನಿಂದ ಬಂದುದು ಭೌಗೋಳಿಕವಾಗಿ ಲುಂಕೆಮಲೆಯು ಮೂರು ಕಡೆ ದೊಡ್ಡ ದೊಡ್ಡ ಬೆಟ್ಟಗಳಿಂದ ಆವೃತವಾದ ಒಂದು ನಿರ್ಜನವಾದ ಕಣಿವೆಯಲ್ಲಿರುವ ಕಾರಣ ತ್ರಿಕೂಟಾಚಲ ಆಗಿದೆ. ಶಾಸನಗಳಲ್ಲಿ "ದುರ್ಗಮಾಟವೀನ ತ್ರಿಪರ್ವತಾನ್ತರ ಸಂಶ್ರಿತಾಂ" ಎಂದು ಇದರ ವರ್ಣನೆಯಿದೆ" ಈ ತ್ರಿಕೂಟವನ್ನು ಪ್ರವೇಶಿಸುವ ಮಾರ್ಗ ಕೂಡ ಇಕ್ಕಟ್ಟಿನ ಕಾಲುಹಾದಿಯದು.

ತ್ರಿಕೂಟವೆಂದರೆ ಯೋಗದಲ್ಲಿ ಇಡೀ ಪಿಂಗಳ ನಾಡಿಗಳು ಸುಷಮ್ನೆಯನ್ನು ಸೇರುವ ಸ್ಥಾನ ಕೂಡ ಹಿರಾರ ಬೆಟ್ಟ ಎಂದೇಕೆ ಹೆಸರು? ಆರ್ಯಾ ತಾರಾಭಗವತಿಯ ಹೆಸರುಗಳಲ್ಲೊಂದು ಅದುವೆ ಆರ್ಯ ಬೆಟ್ಟವೆ ಆಗಿರಬಹುದು ಎಲ್ಲಾವೂ ಊಹೆ"[೧೨]

ಶಾಸನಾಧಾರಗಳು ಸೂಚಿಸುವಂತೆ ನುಂಕೆಮಲೆ ಪ್ರಾಚೀನ ಸ್ಥಳ. ಇದು ಮೊದಲಿಗೆ ಕದಂಬರ ಆಳ್ವಿಕೆಗೆ ಒಳಪ್ಪಟ್ಟಿತ್ತು. ಶಿಕಾರಿಪುರ ಶಾಸನದ ಪ್ರಕಾರ ಕದಂಬರು ಇಲ್ಲಿ ರಾಜಧಾನಿ ಸ್ಥಾಪಿಸಿದರು. ಅಜವರ್ಮನ ಶಾಸನದಲ್ಲಿ (ಕ್ರಿ.ಶ೯೮೬) ಅರಸನು ಅವನ ಮಾಳಿಯಬ್ಬರಸಿಯು ಸೇರಿ ಗಜಿಯಕಪ್ಪಡೆಯರ ಕಾಲಂ ಕರ್ಚಿ ಳುಂಕೇಶ್ವರ ದೇವರ್ಗ' ದತ್ತಿಬಿಟ್ಟ ಪ್ರಸ್ತಾಪವಿದೆ. ಲುಂಕೆಮಲೆಯ ಮಲ್ಲಕಾರ್ಜುನ ಬಂಡೆಯ ಮೇಲಣ ಇನ್ನೊಂದು ಶಾಸನವೂ ಕಲ್ಯಾಣ ಚಾಲುಕ್ಯ ವಿಕ್ರಮಾದಿತ್ಯ ಹಾಕಿಸಿದ್ದು, ಇದರಲ್ಲಿ ಇಲ್ಲಿದ್ದ ಜ್ಞಾನಸತ್ತಿ ಸಬ್ಬೇಶ್ವರ ದೇವರಿಗೆ ದತ್ತಿ ಕೊಟ್ಟಿರುವ ಸಂಗತಿ ತಿಳಿಯುತ್ತದೆ.



ನುಂಕೆಮಲೆಯಲ್ಲಿ ಕಾಪಾಲಿಕ ಭೈರಾಗಿಗಳ ಮಠವಿದ್ದು ಚಿತ್ರದುರ್ಗ ಬಳ್ಳಾರಿ ತುಮಕೂರು ಜಿಲ್ಲೆಗಳ ಕಾಪಾಲಿಕರು ಮಠಕ್ಕೆ ಒಕ್ಕಲಾಗಿರುವರು. ಲುಂಕೆಮಲೆ ಪೀಠವನ್ನು ಸಿದ್ದ ಸಿಂಹಾಸನ ಎಂದು ಕರೆಯುತ್ತಾರೆ. ಕಾಳಭೈರವನ ಹಿಂದೆ ಕಂಬಳಿ ಹಾಸಿಗೆ ಶಂಖು ಕತ್ತಿಗಳುಳ್ಳ ಉರಿಗದ್ದುಗೆಯಿದೆ. ಕಾಲಭೈರವ ಎನ್ನಲಾಗುವ ತ್ರಿಶೂಲವನ್ನು ಪೀಠದಲ್ಲಿದ್ದ ಯಾವುದೇ ಮೂರ್ತಿಯನ್ನು ತೆಗೆದು ನೆಟ್ಟಂತೆ ತೋರುತ್ತದೆ. ಗುಡಿ ಪರಿಸರದಲ್ಲಿ ನಾಥರ ಸಮಾಧಿಗಳಿವೆ. ಒಂದು ಕಲ್ಲು ಸಮಾಧಿಯಲ್ಲಿ ನಾಥರ ದೇಹಗಳನ್ನು ಇಟ್ಟಂತೆ ತೋರುತ್ತದೆ. ಇಲ್ಲಿಗೆ ಸಮೀಪದ ಕಾಡು ಕುರುಬರ ಸಿದ್ದಾಪುರದಲ್ಲಿ ಒಂದು ಗುಹೆ,ಮಾಳಿಗೆ ಸಿದ್ದಪ್ಪನ ಗದ್ದುಗೆಯಿದ್ದು, ಅದರ ಮುಂದೆ ದೊಡ್ಡ ಕಲ್ಲಿನ ತೊಟ್ಟಿಯಾಕಾರದ ಸಮಾಧಿಯಿದೆ, ಅದರೊಳಗೆ ಹಿಂದಿನ ಗುರುಗಳು ಅಸ್ಥಿಗಳನ್ನು ಸಂಗ್ರಹಿಸಿ ಇಡಲಾಗಿದೆ. ಎಲ್ಲೂ ನಾಥರ ಸಮಾಧಿಗಳಿಗೆ ಪೂಜೆ ಮಾಡುವ ಪದ್ದತಿಯಿಲ್ಲ. ನುಂಕೆಮಲೆ ಮಠದ ನಾಥರನ್ನು ಸ್ಥಳೀಯರು ಪರದೇಶಿ ಇಲ್ಲವೆ ಬಾವಾಜಿಗಳು ಎಂದು ಕರೆಯುತ್ತಾರೆ. ನುಂಕೆಮಲೆ ಮಠದ ನಾಥರನ್ನು ಅಧಿಪತಿಗಳಾಗಿದ್ದ ಬಾವಾಜಿಗಳ ಹೆಸರುಗಳು ಹೀಗಿವೆ. ಆದಿರುದ್ರನಾಥ, ಸಿದ್ದಿಯೋಗನಾಥ, ಹರೇಪ್ರನಾಥ, ಹರಿನಾಥ, ಬ್ರಹ್ಮನಾಥ, ಗಿರಿಜಾನಾಥ ಇನ್ನು ಮುಂತಾದವು. ಈಗ ಮಂಗಲನಾಥರನ್ನು ನೇಮಿಸಿದೆ. ಮಠದ ಮುಖ್ಯ ಕೆಲಸಗಳೆಂದರೆ ಶಿಷ್ಯರಾದ ಕಾಪಾಲಿಕರು, ಮ್ಯಾಸಬೇಡರು ಹಾಗೂ ಕಿನ್ನರಿ ಜೋಗಿಗಳಿಗೆ ದೀಕ್ಷೆ ಕೊಡುವುದು, ಭಕ್ತರಿರುವ ಹಳ್ಳಿಗಳಲ್ಲಿ ಸರ್ಕಿಟು ಮಾಡುವುದು ಹಾಗೂ ಕಿನ್ನರಿಯವರಿಗೆ ಭಿಕ್ಷಾಟನೆಯ ಏರಿಯಾ ನಿಗದಿಮಾಡುವುದು. ಕಿನ್ನರಿಯವರಿಗೆ ಬಾವಾಜಿಗಳು ಕೊಡುತ್ತಿದ್ದ ಪ್ರಮಾಣ ಪತ್ರ ಕೊಡುವುದು.

ಮಠದ ಆಡಳಿತ ವ್ಯವಹಾರಗಳನ್ನು ಕನ್ನಡದಲ್ಲಿ ಬರೆದಿಡುವ ಪದ್ದತಿ ಇದೆ. ಇವತ್ತಿಗೂ ಮಠಕ್ಕೆ ಅಧಿಪತಿಯಾಗುವವರು ತಹಸೀಲ್ದಾರ್ ಕಛೇರಿಯಲ್ಲಿ ಕ್ರಮಬದ್ದವಾದ ನೋಂದಣೆ ಮಾಡಿಕೊಂಡು ಅಧಿಕಾರ ಪಡೆಯುತ್ತಾರೆ.

ಮಠಕ್ಕೆ ಆದಾಯದ ಮೂಲಗಳು ಜಮೀನು, ಕೆರೆ, ಬೆದ್ಲು, ಮಾವಿನಮರ, ಹುಣಸೆಮರ,ಹರಕೆ, ಕಾಣಿಕೆಗಳು,ದಾನದತ್ತಿಗಳು ದೀಕ್ಷೆ ಪಡೆದ ಕಿನ್ನರಿ ಜೋಗಿಗಳು ವರ್ಷಕ್ಕೆ ಒಂದು ಜೋಳಿಗೆಗೆ ಒಂದೂವರೆ ರೂಪಾಯಿಯಂತೆ ಕಾಣಿಕೆ ಕಟ್ಟಬೇಕು. ಇದರೊಂದಿಗೆ ಸಿದ್ಧಭುಕ್ತಿ ಕಾಣಿಕೆ ಕಟ್ಟಬೇಕು. ಇದರೊಂದಿಗೆ ಸಿದ್ದಭುಕ್ತಿ ಕಾಣಿಕೆ ದಿಕ್ಷೇ ಕಾಣಿಕೆ ಮದುವೆ ಕಾಣಿಕೆ ದನಗಾಣಿಕೆಗಳಿವೆ. ಪಟ್ಟದ ಪದ್ದತಿ ಅನುಸಾರವಾಗಿ ಸಿದ್ದಭುಕ್ತಿ ಮಾಡಿ ೧೦೧ ರೂ ಗುರುಕಾಣಿಕೆ ತಲೆ ಚರ್ಮ ಪಾತ್ರೆಯನ್ನು ತುಂಬಿಸಿ ಗುರುಸೇವಾ ಮಾಡಿ ಆಶೀರ್ವಾದ ಪಡೆದಿರುತ್ತವೆ. ದುರ್ಬಾರ ಖರ್ಚು ೨೫ ರೂ ಕೊಟ್ಟಿರುತ್ತವೆ.” ಎಂಬ ಬರಹಗಳು ಮಠದ ಕಿರ್ದಿ ಪುಸ್ತಕದಲ್ಲಿದೆ. ಪ್ರತಿ ಪತ್ರಕ್ಕೂ ಬಿಕ್ಕಲಂ ಮಾಡಿದವರ ಹೆಸರು ಹಾಗೂ ಸಾಕ್ಷಿಗಳ ಸಹಿ ಇರುತ್ತದೆ ಕೊನೆಗೆ ಹಿಂದಿಯಲ್ಲಿ ಬಾವಾಜಿಯ ಸಹಿಯಿರುತ್ತದೆ.

ಪ್ರತಿ ವರ್ಷ ಮೇ ತಿಂಗಳಿನಲ್ಲಿ ಏಕಾದಶಿ ದಿನದಂದು ನುಂಕೆಮೆಲೆಯಲ್ಲಿ ಸಿದ್ದಪ್ಪನ ಜಾತ್ರೆ ನಡೆಯುತ್ತದೆ. ಜಾತ್ರೆ ಆರಂಭವಾಗುವದಕ್ಕಿಂತ ೧೫ದಿನಗಳ ಮುಂಚೆ ಕಂಕಣ ಕಟ್ಟುತ್ತಾರೆ. ಇಲ್ಲಿ ೩೩ ಹಳ್ಳಿ ಗ್ರಾಮಸ್ಥರು ಸೇರುತ್ತಾರೆ. ಮೊದಲನೇ ದಿನ ತೇರು ಎರಡನೇದಿನ ತುಪ್ಪದಮ್ಮನ ಸಿಡಿ. ಮೂರನೆಯ ದಿನ ಸಿದ್ಧಭುಕ್ತಿ ಆಚರಣೆಗಳು ಜರುಗುತ್ತವೆ. ತೇರು ಎಳೆಯುವಾಗ ಮುಂದೆ ಹೂವಿನ ಹಾರ ಹಾಕಿ ಬಾವಾಜಿಯವರು ಮೆರೆಸುತ್ತಾರೆ. ತೇರು ಸಂಜೆ ೭ ಘಂಟೆಗೆ ಎಳೆಯುತ್ತಾರೆ. ತೇರನ್ನು ನೊಡಲು ಅನೇಕ ಕಡೆಗಳಿಂದ ಭಕ್ತಾಧಿಗಳು ಆಗಮಿಸುತ್ತಾರೆ. ನವದಂಪತಿಗಳು ತೇರು ನೋಡಿಕೊಂಡು ಬರುವ ಪ್ರತೀತಿ ೩೩ ಹಳ್ಳಿಗಳಲ್ಲಿ ಇದೆ.

ಎರಡನೇಯದಿನ ತುಪ್ಪದಮ್ಮನ ಸಿಡಿ ಸುಮಾರು ೫ ಘಂಟಗೆ ಸರಿಯಾಗಿ ಜರುಗುತ್ತದೆ. ಕೊಮ್ಮನಪಟ್ಟಿ ಬೇಡರು ಸಿಡಿ ಆಡುತ್ತಾರೆ. ಸಿಡಿ ಆಡುವವರು ಸುಮಾರು ೫ ದಿವಸಗಳಕಾಲ ಉಪವಾಸವಿದ್ದು, ಸಿಡಿಯ ದಿವಸ ಸಾಯಾಂಕಾಲ ೪ ಅಥವಾ ೫ ಘಂಟೆಗಳ ಸುಮಾರಿಗೆ ಜರುಗುತ್ತದೆ. ಸಿಡಿ ಆಡುವವರ ಬೆನ್ನಿಗೆ ಕಬ್ಬಿಣ ಮೊಳೆಗಳನ್ನು ಏರಿಸುತ್ತಾರೆ. ಸಿಡಿ ಸಮಯದಲ್ಲಿ ಈತ  ಮಡಿಯಿಂದ ಐದು ದಿನ ಉಪವಾಸವಿದ್ದು ಹೊಂಡದಲ್ಲಿ ಸ್ನಾನ ಮಾಡಿ ಮೈಗೆಲ್ಲಾ ಆರಿಶಿಣ ಬಳೆದುಕೊಂಡಿರುತ್ತಾನೆ. ಸಿಡಿ ಆಡುವ ಮೊದಲು ನುಂಕೇಶ್ವರನ ಗುಡಿಯ ಪಾದಗಟ್ಟೆಯ ಬಳಿ ಹರಳಯ್ಯನಿಂದ ಶಸ್ತ್ರ ಹಾಕಿಸಿಕೊಳ್ಳುತ್ತಾನೆ. ಹರಕೆ ಹೊತ್ತವರು ಬೇವಿನ ಸೀರೆ ಉಡುತ್ತಾರೆ. ನುಂಕೆಭೈರವ, ಕಾಲಭೈರವ ದೇವರುಗಳು ಆಲದ ಮರದ ಬಳಿ ಪೂಜೆಗೆ ಕುಳಿತ್ತಿರುತ್ತವೆ. ಬೆಟ್ಟದ ಮೇಲೆ ಜ್ಯೋತಿ ಬೆಳಗಿಸಿದ ನಂತರ ಕಾಲಭೈರವನ ಗುಡಿಯ ಮುಂದೆ ಸಿಡಿ ನಡೆಯುತ್ತದೆ. ಸಿಡಿ ಸಮಯದಲ್ಲಿ ಸಿಡಿ ಆಡುವುದು ಮುಗಿಯುವವರೆಗೂ ಹರಳಯ್ಯ ಜನರಿಂದ ಕೊಂಡಿ ದುಡ್ಡು ತೆಗೆದುಕೊಳ್ಳುತ್ತಾನೆ. ಸಿಡಿಗೆ ಬಾಳೆಹಣ್ಣು, ಬೆಲ್ಲ, ಮಂಡಕ್ಕಿ ಮುಂತಾದವುಗಳನ್ನು ಎಸೆಯುತ್ತಾರೆ.

ಮೂರನೇಯ ದಿನ ನಾಥಮಠದ ಆವರಣದಲ್ಲಿರುವ ತ್ರಿಶೂಲರೂಪಿ ಕಾಲಭೈರವನಿಗೆ ಸಿದ್ದುಭುಕ್ತಿ ನಡೆಯುತ್ತದೆ. ಒಂದೇ ದೈವವೂ ಭೈರವ ಕಾಲಭೈರವ ದೇವರನ್ನು ಪಾಲಿಕೆಯಲ್ಲಿಟ್ಟುಕೊಂಡು ಮಲ್ಲಿಕಾರ್ಜುನ ಗುಡಿಗೆ ಕರೆದುಕೊಂಡು ಹೋಗಿ ಪೂಜೆ ಮಾಡುತ್ತಾರೆ.

ಜಾತ್ರೆಗೆ ನೆರೆಯ ಆಂಧ್ರಪ್ರದೇಶ, ಬಳ್ಳಾರಿ, ತುಮಕೂರು, ದಾವಣಗೆರೆಗಳಿಂದ ಭಕ್ತಾಧಿಗಳು ಸಹಸ್ರ ಸಂಖ್ಯೆಯಲ್ಲಿ ಬರುತ್ತಾರೆ. ಜಾತ್ರೆಯಲ್ಲಿ ಜನಜಂಗಳಿಯೇ ನೆರೆದಿರುತ್ತದೆ. ಹೊಂಡದಲ್ಲಿ ತಲೆಗಳು ಮಾತ್ರ ಕಾಣುತ್ತವೆ. ಬೀದಿ ಅಕ್ಕಪಕ್ಕಗಳಲ್ಲಿ ಅಂಗಡಿಗಳ ಸಾಲು ಇರುತ್ತದೆ. ಆಟಿಕೆ ಸಾಮಾನುಗಳು ಕೃಷಿ ಸಂಬಂಧಿ ವಸ್ತುಗಳು, ಗೃಹ ಬಳಕೆ ವಸ್ತುಗಳು ಎತ್ತುಗಳ ಅಲಂಕರಣ ಸಾಮಾಗ್ರಿಗಳು ಬಣ್ಣ ಬಣ್ಣದಿಂದ ಅಲಂಕೃತಗೊಂಡಿರುತ್ತವೆ. ಹಣ್ಣು ಕಾಯಿ, ಕುಂಕುಮ, ಸಿಹಿತಿಂಡಿ ಮಾರಾಟ ಮಾಡಲಾಗುತ್ತದೆ. ಸಿಡಿಯ ನಂತರ ಬಲಿ ನಡೆಯುತ್ತದೆ. ಊರಿನಿಂದ ತಂದ ತಿಂಡಿತಿನಸುಗಳನ್ನು ತಿನ್ನುತ್ತಾರೆ. ಜಾತ್ರೆ ಒಂದು ಕಾಲ ನಡೆದರೂ ಪ್ರಧಾನವಾಗಿ ಮೂರು ದಿನಗಳು ವಿಶೇಷವಾಗಿರುತ್ತದೆ.

### ಬ್ರಹ್ಮಗಿರಿ

ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮೂರು ತಾಲ್ಲೂಕಿನಲ್ಲಿದೆ. ಚಿನ್ನಹಗರಿನದಿ ಬ್ರಹ್ಮಗಿರಿ ಮತ್ತು ಜಟಂಗಿ ರಾಮೇಶ್ವರಗಳ ನಡುವೆ ಹರಿಯುತ್ತದೆ. ಮೌರ್ಯ ದೊರೆ ಅಶೋಕನ ಶಿಲಾಶಾಸನವೂ ಈ ಪರಿಸರದಲ್ಲಿದೆ. ಪುರಾತನ ನಿವೇಶನಗಳು,ಗುಡಿಗಳು, ಕೆರೆಕಟ್ಟೆ ಇತ್ಯಾದಿಗಳು ದೊರೆತಿವೆ. ಈ ಬೆಟ್ಟದ ಮೇಲೊಂದು ಮಹಲಿದ್ದು ಚಿಕ್ಕ ಅರಮನೆಯಂತಿದೆ. ಪಕ್ಕದ ಸಿದ್ದೇಶ್ವರ ಗುಡಿಯಲ್ಲಿ ಲಿಂಗವಿದೆ. ಇದರ ಸಮೀಪ ಶಂಕರನ ದೇವಾಲಯ ಅತೀ ಸುಂದರವಾಗಿದೆ. ಸಿದ್ದೇಶ್ವರದಲ್ಲಿ ತಾತನವರ ಮಠವಿದೆ. ಭಕ್ತಾದಿಗಳ ದಾನಾದಿಗಳಿಂದ ಪ್ರತಿದಿನ ಅನ್ನ ದಾಸೋಹವಿದೆ. ಶಿವರಾತ್ರಿಯಲ್ಲಿ ವಿಶೇಷಪೂಜೆ ಹಾಗೂ ಭಜನೆ ಕಾರ್ಯಕ್ರಮಗಳಿರುತ್ತವೆ. ಶಿವರಾತ್ರಿಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಕ್ತಾಧಿಗಳು ಸೇರುತ್ತಾರೆ. ಹೆಬ್ಬಂಡೆಗಳ ಮಧ್ಯೆ ಕಿರಿದಾದ ಜಾಗದಲ್ಲಿ ಸಿಹಿ ನೀರನ್ನು ಮುಟ್ಟಲು ನಿಷೇಧವಿದೆ. ಬ್ರಹ್ಮಗಿರಿ ಬೆಟ್ಟದಲ್ಲಿ ಜೈನ ಮಂದಿರ, ಆಂಜನೇಯ,ಅರಮನೆಯ ಅವಶೇಷಗಳಿವೆ. ಶಾಸನಗಳಲ್ಲಿ ಇಲ್ಲಿನ ಕೋಟೆಗೆ 'ಹನೆಯಕೋಟೆ' ಎಂಬ ಉಲ್ಲೇಖವಿದೆ. ಇಲ್ಲಿ ಸಿಹಿ ನೀರಿನ ದೊಣೆ ಇದೆ. ಆ ನೀರನ್ನು ದೇವರ ಪೂಜಾ ಕಾರ್ಯಗಳಲ್ಲಿ ಬಳಸಲಾಗುತ್ತದೆ. ಅಲ್ಲಿನ ನೀರನ್ನು ತೆಗೆದುಕೊಂಡು ಹೋಗಿ ಹೊಲಗದ್ದೆಗಳಲ್ಲಿ ಸಿಂಪಡಿಸಿದರೆ ಯಾವುದೇ ರೋಗ ಬರುವುದಿಲ್ಲ. ರೋಗ ರುಜಿನಗಳು ಬಂದಾಗ ಇಲ್ಲಿನ ನೀರು ಕುಡಿದರೆ ಗುಣಮುಖರಾಗುತ್ತಾರೆ ಎನ್ನುವ ರೂಢಿ ಇದೆ.

### ಜಟಂಗಿ ರಾಮೇಶ್ವರ

ಚಿನ್ನಹಗರಿ ನದಿಯ ಕೊನೆಯ ಭಾಗದಲ್ಲಿ ಜಟಂಗ ರಾಮೇಶ್ವರ ಕ್ಷೇತ್ರ ಬರುತ್ತದೆ. ಇಲ್ಲಿ

ಜಟಾಯು ವಾಸಿಸಿದ್ದನೆಂಬ ಪ್ರತೀತಿಗಳಿವೆ. ಭೈರವ ಸೂರ್ಯನಾರಾಯಣ, ವೀರಭದ್ರ, ಚಾಮುಂಡಿ ವಿಗ್ರಹಗಳಲ್ಲದೆ, ಪಂಪಾಪತಿ, ಜಂಬುಕೇಶ್ವರ, ಜನಾರ್ಧನ, ಅರ್ಕೇಶ್ವರ, ತಪೋಲಿಂಗ ಮುಂತಾದ ದೇವಾಲಯಗಳಿವೆ.

ಇಲ್ಲಿ ಪರಮೇಶ್ವರಸ್ವಾಮಿ ಮಠವಿದೆ. ವೀರಭದ್ರಸ್ವಾಮಿಯ ಜಾತ್ರೆ ಐದು ವರ್ಷಗಳಿಗೊಮ್ಮೆ ನಡೆಯುತ್ತದೆ. ಗಂಗಾಪೂಜೆಗೆ ಚಿನ್ನಹಗರಿ ನದಿಗೆ ಹೋಗಿ ಅಲ್ಲಿನ ಗಂಗೆಯಿಂದ ದೇವರನ್ನು ಮಾಡುತ್ತಾರೆ. ಯುಗಾದಿಯ ಹಬ್ಬದಲ್ಲಿ ತೇರು ಹಾಗೂ ಅಗ್ನಿಕುಂಡ ನಡೆಯುತ್ತದೆ. ಈ ಸಮಯದಲ್ಲಿ ಲಿಂಗಾಯ್ತ,ದಲಿತರು,ಮಡಿವಾಳರು ಪ್ರಮುಖ ಕಾರ್ಯ ಪಾತ್ರವಹಿಸುತ್ತಾರೆ. ಮಹಿಳೆಯರು ಕಳಶ ಹಿಡಿಯುತ್ತಾರೆ. ದಸರಾ ಹಬ್ಬದಲ್ಲಿ ಒಂಬತ್ತು ದಿನ ಜಾಗರಣೆ ನಡೆಯುತ್ತದೆ. ಶ್ರಾವಣಮಾಸದಲ್ಲಿ ಪುರಾಣವನ್ನು ಹೇಳುತ್ತಾರೆ. ಇಲ್ಲಿ ಬನ್ನಿ ಮುಡಿಸುವ ಹಬ್ಬ ವಿಶೇಷವಾಗಿರುತ್ತದೆ. ಸಂಕ್ರಾಂತಿ, ಶಿವರಾತ್ರಿ, ಕಾರೆಹುಣ್ಣಿಮೆ, ಹಂಪಯ್ಯನ ಹುಣ್ಣಿಮೆ, ಮೊಹರಂ, ನಾಗರ ಪಂಚಮಿ, ಓಕಳಿ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ. ಮದುವೆಯ ಮುಂಚಿನ ದಿನ ವಧುವರರು ಮಲ್ಲಮ್ಮನ ಪೂಜೆ ಮಾಡುತ್ತಾರೆ. ಮಳೆ ಬರದಿದ್ದರೆ ಕತ್ತೆ ಪೂಜೆ ಮಾಡುವ ಪದ್ದತಿ ಇದೆ. ಮಳೆರಾಯನ ಬಗ್ಗೆ ಜನಪದರು ಕಥೆ, ಲಾವಣಿ ಹಾಡುಗಳನ್ನು ಕಟ್ಟಿದ್ದಾರೆ. ಜಾತ್ರೆಯಲ್ಲಿ ಕೋಲಾಟ, ಜೂಜಾಟ ಸಾಂಸ್ಕೃತಿಕ ಕಾರ್ಯಕ್ರಮಗಳು ಜರುಗುತ್ತವೆ.

**ಅಡಿಟಿಪ್ಪಣಿಗಳು**

೧ ಎಫಿಗ್ರಾಫಿಯಾ, ಕರ್ನಾಟಿಕ, ಸಂ ೧೧, ಚಿತ್ರದುರ್ಗ ಪುಟ

೨ ಕಡಗಲ್ ಮರ– ಕೆಂಚವ್ವ ಕಾಮವ್ವ ಮಜ್ಜಿಗೆ ಮಾಡಲು ಉಪಯೋಗಿಸುತ್ತಿದ್ದ ಮರ.

೩ ನರಸಿಂಹರಾಜ.ಟಿ: ಎಂ.ಫಿಲ್ ಅಪ್ರಕಟಿತ ನಿಬಂಧ, ಕುವೆಂಪು ವಿಶ್ವವಿದ್ಯಾಲಯ, ಪು–೬೧

೪ ಅದೇ. ಪು ೬೧

೫ ಗಿರಿಜಾ.ಟಿ : ಚಿತ್ರದುರ್ಗಜಿಲ್ಲಾದರ್ಶಿನಿ, ರೇಖಾಪ್ರಕಾಶನ, ಮೈಸೂರುಮಠದರಸ್ತೆ, ದಾವಣಗೆರೆ. ಪು ೯೭

೬ ವಿರುಪಾಕ್ಷಿ ಪೂಜಾರಿಹಳ್ಳಿ: ಚಿನ್ನಹಗರಿಸಿರಿ, ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ, ಪೂಜಾರಹಳ್ಳಿ ಪುಟ ೧೬೦–೧೬೩

೭. ವಿರೂಪಾಕ್ಷಿಪೂಜಾರಹಳ್ಳಿ: ಚಿತ್ರದುರ್ಗಜಿಲ್ಲೆಯ ಬುಡಕಟ್ಟು ವೀರರು, ಪುಟ ೫೨

೧೦ ವಿರೂಪಾಕ್ಷಿ ಪೂಜಾರಹಳ್ಳಿ: ಚಿನ್ನಹಗರಿಸಿರಿ, ಚಿನ್ನಹಗರಿ ಪ್ರಕಾಶನ. ಕೆ.ಬಿ.ಹಟ್ಟಿ

೧೧ ಅದೇ. ಪುಟ ೧೦೮ ಮತ್ತು ೧೦೭

೧೨ ರಹಮತ್ ತರೀಕೆರೆ: ಕರ್ನಾಟಕದಲ್ಲಿ ನಾಥಪಂಥ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ. ಪು ೧೯೨

೧೩ ಎಸ್.ವೈ.ಸೋಮಶೇಖರ:ಜಟಂಗಿರಾಮೇಶ್ವರ ದರ್ಶನ, ಸುಮೇಧ ಪ್ರಕಾಶನ. ದೇವಸಮುದ್ರ ಪುಟ ೨೫–೪೩

## ಅಧ್ಯಾಯ : ಐದು

# ಚಿನ್ನಹಗರಿ ನದಿ ಪರಿಸರದ ಕಲೆ ಮತ್ತು ವಾಸ್ತುಶಿಲ್ಪ

ಮಾನವನ ಜೀವನದಲ್ಲಿ ಪ್ರಕೃತಿಯು ಅತಿ ಮಹತ್ತರ ಪಾತ್ರವನ್ನು ನಿರ್ವಹಿಸುತ್ತದೆ. ಪ್ರಕೃತಿದತ್ತವಾದ ಗಿಡ, ಮರ, ನದಿ, ಅಗ್ನಿ, ಸೂರ್ಯ, ಹಳ್ಳ, ಕೊಳ್ಳ ಚಂದ್ರ, ನಕ್ಷತ್ರ, ಮಳೆ,ಹಾವು,ಹುಲಿ ಇನ್ನೂ ಮುಂತಾದವುಗಳ "ಸೃಷ್ಟಿಯ ಹಿನ್ನೆಲೆಯಲ್ಲಿ ಯಾವುದೋ ಒಂದು ಅನಂತಶಕ್ತಿ ಅಡಗಿದೆಯೆಂದು ಭಾವಿಸಿ ಅವುಗಳನ್ನು ಪೂಜಿಸಲು ಪ್ರಯತ್ನಿಸಿದನು. ಹಾಗೆಯೇ ಅನಂತ ಶಕ್ತಿಗೊಂದು ರೂಪಕೊಟ್ಟು"[1] ಅದರ ರಕ್ಷಣೆಗಾಗಿ ನಿರ್ಮಿಸಿಕೊಂಡಿದ್ದು ದೇವಾಲಯ ವಾಸ್ತು ಶಿಲ್ಪವಾಯಿತು.

ಕರ್ನಾಟಕದಲ್ಲಿ ವಿಭಿನ್ನ ಮಾದರಿಯ ದೇವಾಲಯಗಳನ್ನು ಗುರುತಿಸಬಹುದು. ಅವುಗಳು ಸಾಂಸ್ಕೃತಿಕ ಅಧ್ಯಯನಕ್ಕೆ ಅನುವು ಮಾಡಿಕೊಡುವ ಬಹು ಆಯಾಮಗಳನ್ನು ಅನನ್ಯತೆಯ ಪ್ರತೀಕಗಳಾಗಿವೆ. ಶಿಲ್ಪಶಾಸ್ತ್ರ, ವಾಸ್ತುಶಿಲ್ಪ, ಧರ್ಮ, ಆರಾಧನೆ, ಜನಪದ, ಕಸಬುಗಳು, ಆರ್ಥಿಕತೆ ಹೀಗೆ ಅನೇಕ ನೆಲೆಗಳಿಂದ ದೇವಾಲಯಗಳನ್ನು ಪರಿಭಾವಿಸಬಹುದು. ಶಿಲ್ಪ ಮತ್ತು ವಾಸ್ತುಶಿಲ್ಪಗಳ ಶ್ರೇಷ್ಠತೆ, ಆರಾಧನೆಗಳ ಭೂಮತೆ ಹಾಗೂ ಅವುಗಳಿಗೆ ಪೂರಕವಾದ ಜನಪ್ರಿಯತೆಯನ್ನು ಆಧರಿಸಿಕೊಂಡು ದೇವಾಲಯಗಳನ್ನು ವಿವರಿಸಬಹುದು.

ಪ್ರಸ್ತುತ ನಿಬಂಧದ ಪರಿಸರದಲ್ಲಿ ಕದಂಬ, ರಾಷ್ಟ್ರಕೂಟ, ಕಲ್ಯಾಣಿ ಚಾಲುಕ್ಯ, ನೊಳಂಬ, ಹೊಯ್ಸಳ, ಪಾಳೆಯಗಾರರ ಕಾಲಘಟ್ಟಗಳಲ್ಲಿ ನಿರ್ಮಾಣವಾದ ದೇವಾಲಯಗಳು ಕಂಡುಬಂದಿವೆ. ಅವುಗಳನ್ನು ಶೈವ, ವೈಷ್ಣವ ಮತ್ತು ಶಾಕ್ತೇಯ ಎಂದು ವಿಭಾಗಿಸಿ ಈ ಕೆಳಗಿನಂತೆ ವಿವರಿಸಲಾಗಿದೆ.

### ಶೈವ ದೇವಾಲಯಗಳು

ಚಿತ್ರದುರ್ಗ ತಾಲ್ಲೂಕಿನ ಗೊಡಬನಹಾಳ್‌ನಲ್ಲಿರುವ ಕಲ್ಲೇಶ್ವರ ದೇವಾಲಯವೂ ಶೈವ ದೇವಾಲಯವಾಗಿದೆ. ಈ ದೇವಾಲಯದ ಗರ್ಭಗೃಹದಲ್ಲಿ ಪ್ರವೇಶ ದ್ವಾರವೂ ಸರಳ ಕೆತ್ತನೆಗಳಿಂದ ಕೂಡಿದೆ. ಇಲ್ಲಿನ ವಾಸ್ತು ಲಕ್ಷಣಗಳನ್ನು ಆಧರಿಸಿ ಕಲ್ಯಾಣಿ ಚಾಲುಕ್ಯರ ಕಾಲದ ದೇವಾಲಯವೆಂದು ಗುರುತಿಸಬಹುದು.

### ವೀರಭದ್ರ ದೇವಾಲಯ – ಗೊಡಬನಹಾಳ್

ದೇವಾಲಯದ ಗರ್ಭಗೃಹದಲ್ಲಿ ಬೇತಾಳ ಭೈರವನ ಶಿಲ್ಪವಿದೆ. ಶಿಲ್ಪದಲ್ಲಿನ ಮೂಳೆಗಳು ಎದ್ದು ಕಾಣುತ್ತವೆ. ಬಲಗೈಯಲ್ಲಿ ಖಡ್ಗ ಹಿಡಿದಿದ್ದು ಎಡಗೈಯಲ್ಲಿ ವ್ಯಕ್ತಿಯನ್ನು ಹಿಡಿದು ಕತ್ತರಿಸಲು

ಸಿದ್ದವಾಗಿರುವ ಭಯನಖ ಶಿಲ್ಪವಿದ್ದು." ದೇವಾಲಯದ ಒಳಗೋಡೆಯಲ್ಲಿ ಶಾಸನೋಕ್ತ ಉಬ್ಬು ಶಿಲ್ಪ ಫಲಕವನ್ನು ಅಳವಡಿಸಿದ್ದಾರೆ. ಶಾಸನದ ಮೇಲ್ಭಾಗದಲ್ಲಿ ದನಕರು, ಸೂರ್ಯ, ಚಂದ್ರ, ಲಿಂಗ ಮತ್ತು ಯತಿಯ ಉಬ್ಬು ಶಿಲ್ಪಗಳಿವೆ. ಶಾಸನದ ಕೆಳಭಾಗದಲ್ಲಿ ದಕ್ಷನು ಕುಳಿತಿದ್ದು ಸುತ್ತಲೂ ಪರಿವಾರದ ಉಬ್ಬುಶಿಲ್ಪಗಳಿವೆ. ಲಿಪಿಯಿಂದ ರಾಷ್ಟ್ರಕೂಟರ ಕಾಲದೆಂದು ಗುರುತಿಸಬಹುದು.

## ಮಲ್ಲೇಶ್ವರ ದೇವಾಲಯ

ಹೂಲ್ಲೂರಿನ ಮಲ್ಲೇಶ್ವರ ದೇವಾಲಯ ಗರ್ಭಗೃಹ ಹಾಗೂ ಸುಖನಾಸಿಗಳನ್ನು ಒಳಗೊಂಡಿದ್ದು, ಗ್ರಾನೈಟ್ ಶಿಲೆಯ ಕಡಿದ ಕಂಬಗಳಿವೆ. ಗರ್ಭಗುಡಿ ಬಾಗಿಲಿಗೆ ಜೋಡಿ ಕಂಬದ ಮೇಲೆ ಮಕರ ತೋರಣ ಅತ್ಯಂತ ಕಲಾತ್ಮಕವಾಗಿದೆ. ಒಂಭತ್ತು ದೊಡ್ಡ ಕಮಲಗಳ ಭುವನೇಶ್ವರಿ ಈಗಲೂ ಸುಂದರವಾಗಿದೆ.ನರಸಿಂಹನ ವಿಗ್ರಹ, ಚಾಮುಂಡೇಶ್ವರಿ ನಟರಾಜ ಗಣೇಶನ ವಿಗ್ರಹಗಳು ಅಂದವಾಗಿ ಅಲ್ಲೇ ಕುಳಿತಂತೆ ಇವೆ. "ಈ ದೇವಾಲಯದಲ್ಲಿದ್ದ ಕೇಶವ ಮತ್ತು ಶಿವಲಿಂಗವನ್ನು ಚಿತ್ರದುರ್ಗಕ್ಕೆ ಕೊಂಡ್ಯೋಯ್ದರು. ಆಗ ಗುಡಿಯ ಎದುರಿಗಿದ್ದ ಗರುಡ ಗಂಭದ ಮೇಲಿನ ಗರುಡ ಪಕ್ಷಿ ವಿಗ್ರಹ ಬಿದ್ದು ಹೋಯಿತಂತೆ. ಮೊದಲು ಈ ಗರುಡ ಗಂಭದ ಮೇಲಿನ ರಶ್ಮಿ ಗರ್ಭಗುಡಿಯ ದೇವರ ಮೇಲೆ ಬೀಳುತ್ತಿತ್ತಂತೆ.[೨] ಇಲ್ಲಿನ ಅಂಶಗಳನ್ನು ಗಮನಿಸಿ ೧೭-೧೮ ನೇ ಶತಮಾನದಲ್ಲಿ ರಚಿತವಾದ ಹೊಯ್ಸಳ ಶೈಲಿಯಲ್ಲಿದೆ ಎಂದು ಹೇಳಬಹುದು.

## ಕಲ್ಲೇಶ್ವರ ದೇವಾಲಯ

ಕಲ್ಲೇದೇವರಪುರದ ಕಲ್ಲೇಶ್ವರ ದೇವಾಲಯದಿಂದ ಈ ಗ್ರಾಮ ಮಹತ್ವ ಸ್ಥಾನವನ್ನು ಪಡೆದುಕೊಂಡಿದೆ. ದೇವಾಲಯವು ಗರ್ಭಗುಡಿ, ಅಂತರಾಳ, ನವರಂಗ, ಮುಖ ಮಂಟಪವನ್ನು ಒಳಗೊಂಡಿದೆ. ಹೊರಭಾಗದ ಆದಿಷ್ಠಾನ ಉಪಾನ ಪದ್ಮ ಕಪೋತಗಳನ್ನು ಒಳಗೊಂಡಿದೆ. ಅಲ್ಲಲ್ಲಿ ನಂತರ ಕಾಲದಲ್ಲಿ ಈ ಭಾಗವನ್ನು ದುರಸ್ಥಿಗೊಳಿಸಿದ್ದಾರೆ. ಭಿತ್ತಿಭಾಗವೂ ಅರೆಗಂಬಗಳಿಂದ ಕೂಡಿದ್ದು ಮಿಕ್ಕಿದಂತೆ ಸರಳವಾಗಿದೆ. ಮುಖಮಂಟಪದ ಭಾಗವನ್ನು ಇತ್ತೀಚಿಗೆ ನವೀಕರಿಸಲಾಗಿದೆ. ಭಿತ್ತಿಯ ಮೇಲೆ ಪ್ರಸ್ತಾರ ಭಾಗವಿದ್ದು, ಅದರಲ್ಲಿನ ಕಪೋತ ಭಾಗವೂ ಕೆಳಭಾಗಿದ ರೀತಿಯಲ್ಲಿದ್ದು, ಸರಳವಾಗಿದೆ. ಗರ್ಭಗುಡಿಯ ಮೇಲೆ ಕದಂಬ ನಾಗರ ಶೈಲಿಯ ಶಿಖರವಿದೆ. ಶಿಖರದ ಮೇಲೆ ಹಿತ್ತಾಳೆ ಕಳಶವಿದೆ. ಶಿಖರದ ಮುಂಭಾಗದಲ್ಲಿ ಹೊಯ್ಸಳರ ಲಾಂಛನವಾದ ಸಳ ಹುಲಿಯೊಡನೆ ಹೋರಾಡುತ್ತಿರುವ ದೃಶ್ಯವಿರುವ ಲೌಕಿಕ ಮೂರ್ತಿಯೊಂದನ್ನು ಇಡಲಾಗಿದೆ. ಆದರೆ ಹುಲಿ ಮಾತ್ರ ಈಗ ಕಾಣುತ್ತಿದ್ದು ಉಳಿದ ಭಾಗ ತ್ರುಟಿತವಾಗಿದೆ.

ಚೌಕಾಕಾರದ ಗರ್ಭಗುಡಿಯಿದ್ದು ಅದರಲ್ಲಿ ಲಿಂಗವಿದೆ. ಇದರ ಮುಂಭಾಗದಲ್ಲಿ ಅರಳಿದ ಪದ್ಮವಿದ್ದು ದ್ವಾರಕ್ಕೆ ಇತ್ತೀಚಿಗೆ ಹಿತ್ತಾಳೆಯ ತೆಗೆದು ಹಾಕಿದ್ದಾರೆ. ಅಂತರಾಳವು ಆಯತಾಕಾರವಾಗಿದ್ದು

ಇಲ್ಲಿನ ದ್ವಾರವು ಸರಳವಾಗಿದೆ. ನವರಂಗವನ್ನು ಪ್ರವೇಶಿಸಲು ಪೂರ್ವ ಮತ್ತು ದಕ್ಷಿಣಕ್ಕೆ ಪ್ರವೇಶ ದ್ವಾರಗಳಿವೆ. ನವರಂಗದ ಉತ್ತರ ಭಾಗಕ್ಕೆ ಸಣ್ಣಕೋಷ್ಠ ಗುಡಿ ಇದೆ. ಅಲ್ಲಲ್ಲಿ ವಿಷ್ಣು, ನಂದಿ, ಗಣಪತಿ,ವೀರಭದ್ರ ಮೊದಲಾದ ಮೂರ್ತಿಗಳಿವೆ. ಮಧ್ಯದಲ್ಲಿ ನಾಲ್ಕು ಸುಂದರ ಬಳಪದ ಕಲ್ಲಿನ ಕಂಬಗಳಿದ್ದು, ಅವು ಚೌಕ ಹಾಗೂ ವೃತ್ತಕಾರದಲ್ಲಿವೆ. ದಂಡಭಾಗವು ಚೌಕಾಕಾರವಾಗಿದ್ದು, ಅದರ ಮೇಲಿನ ದಂಡಾಗ್ರ ಭಾಗವು ವೃತ್ತಾಕಾರವಾಗಿ ಬಳೆಯ ಅಲಂಕಾರಗಳಿಂದ ಹಾಗೂ ಗಂಟೆಯ ಅಲಂಕಾರವನ್ನು ಪಡೆದುಕೊಂಡಿದೆ. ಗಂಟೆಯಾಕಾರದ ಭಾಗದಲ್ಲಿ ಮಣಿಸರ ಪತ್ರ ಮತ್ತು ಪುಷ್ಪಗಳನ್ನು ಬಿಡಿಸಿರುವುದು ವಿಶೇಷವಾಗಿದೆ. ಭೋದಿಗೆಗಳನ್ನು ಸರಳವಾಗಿ ಕೆತ್ತಲಾಗಿದೆ. ನವರಂಗದ ದ್ವಾರವು ಸರಳವಾಗಿದ್ದು ಲಲಾಟದಲ್ಲಿ ಗಣಪತಿಯ ಶಿಲ್ಪವಿದೆ. ಇದರ ಕೆಳಗಡೆ ಎರಡು ಇಲಿಗಳನ್ನು ಚಿಕ್ಕದಾಗಿ ಬಿಡಿಸಲಾಗಿದೆ.ಗಣಪತಿಯ ಎಡಬದಿಗೆ ಕುಮಾರಸ್ವಾಮಿಯನ್ನು ಕೆತ್ತಲಾಗಿದೆ. ಮುಖ ಮಂಟಪದಲ್ಲಿ ನಾಲ್ಕು ಗ್ರಾನೈಟ್ ಕಲ್ಲಿನ ಕಂಬಗಳಿವೆ.

ಇದೇ ಮಂಟಪದಲ್ಲಿ ನಂತರ ಕಾಲದಲ್ಲಿ ನಿರ್ಮಿಸಿದ ಗೌರಮ್ಮ ವೀರಭದ್ರನ ಉಪಗುಡಿಗಳಿವೆ. ಮುಖಮಂಟಪದ ದ್ವಾರದಲ್ಲಿ ಶೈವ ದ್ವಾರಪಾಲಕರಿದ್ದು, ಅವರ ಎಡಬಲದಲ್ಲಿ ಚಾಮರ ಹಿಡಿದ ಸ್ತ್ರೀಯರು ಹಾಗೂ ಅಂಜಲಿ, ನಂದಿ ಮೂರ್ತಿಗಳು ಹಾಗೂ ಉಯ್ಯಾಲೆ ಕಂಬವಿದೆ.

ದೇವಾಲಯದ ಮೇಲಿರುವ ಹೊಯ್ಸಳ ಲಾಂಛನ ಹಾಗೂ ವಾಸ್ತು ಲಕ್ಷಣಗಳನ್ನು ಆಧಾರವಾಗಿಟ್ಟುಕೊಂಡು ಈ ದೇವಾಲಯ ಹೊಯ್ಸಳರ ಕಾಲದ್ದೆಂದು ಹೇಳಬಹುದು ಹಾಗೂ ಹೊಯ್ಸಳ ರಾಜರ ಸಾಮಾಂತರು ಈ ದೇವಾಲಯಕ್ಕೆ ದಾನ ಬಿಟ್ಟ ಬಗ್ಗೆ ಇಲ್ಲಿನ ಶಾಸನಗಳಿಂದ ವಿವರಣೆ ದೊರಕುತ್ತದೆ.

**ತ್ರಿಕೂಟಲಿಂಗೇಶ್ವರ ದೇವಾಲಯ**

ಕ್ರಿ.ಶ. ೧೧ನೇ ಶತಮಾನದಲ್ಲಿ ನಿರ್ಮಾಣವಾದ ತ್ರಿಕೂಟಲಿಂಗೇಶ್ವರ ದೇವಾಲಯ ಕಲ್ಲೇದೇವರಪುರದಲ್ಲಿದೆ. ದೇವಾಲಯದ ದಕ್ಷಿಣ ಪೂರ್ವ ಮತ್ತು ಪಶ್ಚಿಮ ದಿಕ್ಕಿನಲ್ಲಿ ಮೂರು ಗರ್ಭಗುಡಿಗಳನ್ನು ಹೊಂದಿದ್ದು ಇವುಗಳ ಮುಂಭಾಗದಲ್ಲಿ ನವರಂಗವಿದೆ.

ಹೊರಭಾಗದ ಅದಿಷ್ಠಾನವೂ ಭೂಮಿಯಲ್ಲಿ ಹೂತಿದ್ದು ಭಿತ್ತಿಯು ಸರಳವಾಗಿದೆ ಗರ್ಭಗುಡಿಯ ಮೇಲೆ ಶಿಖರವಿಲ್ಲ ದೇವಾಲಯದ ಭಿತ್ತಿಯನ್ನು ಇತ್ತೀಚಿಗೆ ಅಲ್ಲಲ್ಲಿ ನವೀಕರಿಸಲಾಗಿದೆ.

ಇಲ್ಲಿನ ಮೂರು ಗರ್ಭಗುಡಿಗಳು ಚೌಕಾಕಾರವಾಗಿದ್ದು, ಇವು ಪೂರ್ವ, ಪಶ್ಚಿಮ, ದಕ್ಷಿಣ ಭಾಗದಲ್ಲಿವೆ. ಈ ಮೂರು ಗರ್ಭಗುಡಿಗಳಲ್ಲೂ ಲಿಂಗಗಳಿದ್ದು ಪಶ್ಚಿಮ ಭಾಗದ ಗರ್ಭಗುಡಿಯಲ್ಲಿ ಲಿಂಗದೆದುರು ನಂದಿ ಇದೆ. ಇವುಗಳನ್ನು ಕ್ರಮವಾಗಿ ಬ್ರಹ್ಮ ಮತ್ತು ವಿಷ್ಣು ಲಿಂಗಗಳೆಂದು ಸ್ಥಳೀಯರು ಕರೆಯುತ್ತಾರೆ. ಇದಲ್ಲದೆ ಇಲ್ಲಿನ ಲಿಂಗಗಳನ್ನು ಕ್ರಮವಾಗಿ ಕಲ್ಲಿನಾಥ,ಮಲ್ಲಿನಾಥ,

ಅಲ್ಲಣದೇವರೆಂದು ಸ್ಥಳೀಯರು ಕರೆಯುತ್ತಾರೆ. ಇಲ್ಲಿನ ಮೂರು ಗರ್ಭಗುಡಿಗಳ ದ್ವಾರಗಳಲ್ಲಿ ಸ್ತಂಭ ಶಾಖೆ ಮಾತ್ರ ಇದ್ದು ಉಳಿದಂತೆ ಸರಳವಾಗಿದೆ. ಲಲಾಟ ಬಿಂಬದಲ್ಲಿ ಯಾವುದೇ ಶಿಲ್ಪಗಳಿಲ್ಲ ಪ್ರವೇಶದ್ವಾರಕ್ಕೆ ಎದುರಾಗಿರುವ ಗರ್ಭಗುಡಿಯ ಲಲಾಟ ಬಿಂಬದ ಮೇಲಿನ ಉತ್ತರಾಂಗ ಭಾಗದಲ್ಲಿ ಶಿಖರದ ವಿವಿಧ ಮಾದರಿಗಳನ್ನು ಕೆತ್ತಲಾಗಿದೆ.

ನವರಂಗದಲ್ಲಿ ಒಟ್ಟು ಎಂಟು ಕೋಷ್ಠಗುಡಿಗಳಿವೆ. ದಕ್ಷಿಣದ ಗರ್ಭಗುಡಿಯ ಎಡಭಾಗದ ಕೋಷ್ಠಗುಡಿಗಳಿವೆ. ದಕ್ಷಿಣದ ಗರ್ಭಗುಡಿಯ ಎಡಭಾಗದ ಕೋಷ್ಠ ಗುಡಿಯಲ್ಲಿ ಸಪ್ತ ಮಾತೃಕೆಯರ ವಿಗ್ರಹವಿದೆ. ಉಳಿದ ಕೋಷ್ಠಗುಡಿಗಳಲ್ಲಿ ಮೂರ್ತಿಗಳನ್ನು ನವರಂಗದಲ್ಲಿ ನಾಲ್ಕು ಕಪ್ಪು ಕಲ್ಲಿನ ಕಂಭಗಳಿದ್ದು ಪೀಠದ ಮೇಲೆ ನಿಂತಿರುವ ಈ ಕಂಬಗಳು ಚೌಕ ಹಾಗೂ ವೃತ್ತಾಕಾರವಾಗಿವೆ. ಕಂಬದ ಚೌಕಾಕಾರದ ಮೇಲಿನ ಭಾಗದಲ್ಲಿ ಬಳೆಗಳ ಅಲಂಕಾರವಿದ್ದು, ಅದರ ಮೇಲೆ ಕೆಳಭಾಗದ ಗಂಟೆಯಾಕಾರವಿದೆ. ಇದರ ಮೇಲೆ ಮಾಲಾಲಂಕಾರ ಹಾಗೂ ಲತಾಲಂಕಾರವನ್ನು ಮಾಡಲಾಗಿದೆ. ಇಲ್ಲಿನ ಫಲಕ ಭಾಗವೂ ಸಹ ವೃತ್ತಾಕಾರವಾಗಿದ್ದು, ಪದ್ಮಲಂಕಾರವನ್ನು ಪಡೆದುಕೊಂಡಿದೆ. ಇಲ್ಲಿನ ಭೋದಿಗೆಗಳೂ ಸರಳವಾಗಿವೆ ನವರಂಗದ ಮುಚ್ಚಿಗೆಯಲ್ಲಿ ಪದ್ಮವಿದೆ.

ಪ್ರವೇಶ ದ್ವಾರವು ಉತ್ತರಕ್ಕಿದ್ದು, ಪೇದ್ಯಾಭಾಗದಲ್ಲಿ ದ್ವಾರ ಪಾಲಕರಿದ್ದಾರೆ. ದ್ವಾರವು ರತ್ನ,ಲತಾ,ಸ್ತಂಭ,ವ್ಯಾಳಿ ಶಾಖೆಗಳಿಂದ ಅಲಂಕೃತವಾಗಿದ್ದು, ಮೊದಲಿನ ಎರಡು ಶಾಖೆಗಳು ಲಲಾಟ ಬಿಂಬದವರೆಗೂ ಮುಂದುವರಿದಿವೆ. ಲಲಾಟಬಿಂಬದಲ್ಲಿ ಯಾವುದೇ ಶಿಲ್ಪಗಳಿರದೆ ಸರಳವಾಗಿದೆ. ಲಲಾಟದ ಎಡಬಲದಲ್ಲಿ ಇಳಿಬಿದ್ದ ತಾವರೆಯ ಮೊಗ್ಗಿನ ಅಲಂಕಾರವಿದೆ. ಪ್ರವೇಶ ದ್ವಾರದ ಮೇಲೆ ಇತ್ತೀಚೆಗೆ ನಿರ್ಮಿಸಿದ ಕಮಾನು ಗೂಡಿನಲ್ಲಿ ಕಾರ್ತಿಕೇಯನ ಮೂರ್ತಿ ಇದೆ.

ಈ ದೇವಾಲಯ ಕಂಬ ದ್ವಾರ ಮತ್ತಿತರ ವಾಸ್ತು ಲಕ್ಷಣಗಳನ್ನು ಆಧಾರವಾಗಿಟ್ಟುಕೊಂಡು ಇದು ಕಲ್ಯಾಣಿ ಚಾಲುಕ್ಯರ ಕಾಲದ್ದೆಂದು ಹೇಳಬಹುದು. ಈ ದೇವಾಲಯವನ್ನು ಅಂತ್ಯ ಚಾಲುಕ್ಯರ ಕಾಲದ್ದೆಂದು ಕೆಲವರು ಹೇಳಿದ್ದಾರೆ.

**ಮುಷ್ಪೂರೇಶ್ವರ ದೇವಾಲಯ**

ಮುಷ್ಪೂರಿನ ಈ ದೇವಾಲಯವು ಗರ್ಭಗುಡಿ,ಅಂರತಾಳ,ಮುಖಮಂಟಪವನ್ನು ಒಳಗೊಂಡಿದೆ. ದೇವಾಲಯದ ಸುತ್ತಲೂ ಪ್ರಾಕಾರಗೋಡೆ ಇದೆ. ಅದಿಷ್ಠಾನ ಉಪಾನ ಪದ್ಮ, ಕಪೋತ, ಕಂಠಭಾಗದಿಂದ ಕೂಡಿದ್ದು ಸಾದಾರಣವಾಗಿದೆ. ಗರ್ಭಗುಡಿಯ ಭಾಗದ ಬಿತ್ತಿಯೂ ಅಲಂಕೃತವಾಗಿಲ್ಲ. ಅಂತರಾಳ, ನವರಂಗ ಹಾಗೂ ಮುಖಮಂಟಪ ಹೊರಭಾಗದ ಬಿತ್ತಿಯಲ್ಲಿ ಅರೆಗಂಬಗಳನ್ನು ಕೆತ್ತಲಾಗಿದೆ. ಬಿತ್ತಿಯ ಮೇಲೆ ಕಪೋತವಿದೆ. ನವರಂಗದ ಮೇಲ್ಛಾವಣಿ ಇಳಿಜಾರಾಗಿದೆ. ಗರ್ಭಗುಡಿಯ ಮೇಲ್ಭಾಗದಲ್ಲಿ ಸ್ಥಳೀಯ ಮಾದರಿಯ ಶಿಖರವಿದೆ.

ದೇವಾಲಯದ ಸುತ್ತಲೂ ಪ್ರಕಾರ ಗೋಡೆ ಇದ್ದು ದಕ್ಷಿಣದಲ್ಲಿ ಮುಖ್ಯ ಪ್ರವೇಶದ್ವಾರವಿದೆ. ಇದಕ್ಕೆ ಅಂಟಿಕೊಂಡಂತೆ ಹಿಂದೆ ಮೂಲ ದೇವಾಲಯ ಎಡಭಾಗದಲ್ಲಿ ಸಪ್ತ ಮಾತೃಕೆಯರ ವಿಗ್ರಹಗಳು ಮತ್ತು ಬನ್ನಿಮರವಿದೆ.

ನವರಂಗದಲ್ಲಿ ಕಂಬಗಳನ್ನು ಅಲಂಕರಣ ಮಾಡಲಾಗಿದೆ. ಗೋಡೆಯಲ್ಲಿ ಶಿವ,ಲಕ್ಷ್ಮೀ, ವಿಷ್ಣು, ಉಗ್ರನರಸಿಂಹ, ಮಹಿಷಾಸುರ ಮರ್ದಿನಿ ಮುಂತಾದ ಚಿತ್ರಗಳನ್ನು ಬಿಡಿಸಲಾಗಿದೆ. ದೇವಾಲಯದ ಮುಂದಿನ ಪ್ರವೇಶದ್ವಾರದ ಮೇಲೆ ಗೋಪುರವಿದ್ದು ಸಾದಾರಣವಾಗಿದೆ. ಇದರ ವಾಸ್ತು ಲಕ್ಷಣಗಳನ್ನು ಗುರುತಿಸಿ ಇದನ್ನು ಪಾಳೆಯಗಾರರ ಕಾಲದ ಸ್ಮಾರಕ ಎಂದು ಗುರುತಿಸಬಹುದು. ಮುಷ್ಟೂರು ಸ್ವಾಮಿ ಮಠ ಇಂಡೋ–ಇಸ್ಲಾಮಿಕ್ ಶೈಲಿಯ ಲಕ್ಷಣಗಳನ್ನು ಹೊಂದಿದೆ. ಗರ್ಭಗೃಹ ಮುಖಮಂಟಪ ಅಕ್ಕಪಕ್ಕ ವಿಶ್ರಾಂತಿ ಗೃಹ ಮತ್ತು ಹಿಂದೆ ವಸ್ತು ಸಂಗ್ರಹಾಲಯವಿದೆ. ಪ್ರತಿ ವರ್ಷ ಮುಷ್ಟೂರುಸ್ವಾಮಿ ಜಾತ್ರೆ ನಡೆಯುತ್ತದೆ. ಆಗ ಪವಾಡ ಪುರುಷ ಮುಷ್ಟೂರು ಮಠದ ಸ್ವಾಮಿಗಳು ಪ್ರಮುಖ ಪಾತ್ರ ವಹಿಸುತ್ತಾರೆ.

**ಕಲ್ಲೇಶ್ವರ ದೇವಾಲಯ (ಕಲ್ಲಹಳ್ಳಿ)**

ಜನಗಿಹಳ್ಳ ಅಥವಾ ಚಿನ್ನಹಗರಿ ನದಿ ದಂಡೆಯಲ್ಲಿರುವ ದೇವಾಲಯವನ್ನು ಕಣಶಿಲೆಯಿಂದ ಕಟ್ಟಿದ್ದು, ಇದರಲ್ಲಿ ಗರ್ಭಗೃಹ, ಅಂತರಾಳ ಮತ್ತು ಸಭಾ ಮಂಟಪಗಳಿವೆ. ಗರ್ಭಗೃಹದಲ್ಲಿ ಕಪ್ಪು ಶಿಲೆಯ ಶಿವಲಿಂಗ ಸಭಾಮಂಟಪದಲ್ಲಿ ನಂದಿ ಶಿಲ್ಪಗಳಿವೆ. ಸಭಾಮಂಟಪದ ಮಧ್ಯದಲ್ಲಿರುವ ನಾಲ್ಕು ಕಂಬಗಳನ್ನು ಚಚ್ಚಾಕ ಮತ್ತು ಅಷ್ಟ ಮುಖಗಳಲ್ಲಿ ಕೆತ್ತಲಾಗಿದೆ. ಸಭಾಮಂಟಪದ ಸುತ್ತ ಇದರ ಗೋಡೆ ಹಾಳಾಗಿದ್ದು, ಕಂಬಗಳು ಮಾತ್ರ ನಿಂತಿವೆ. ಈ ಕಂಬಗಳು ಯಾವ ಅಲಂಕರಣೆಯಿರದೆ ಚಚ್ಚೌಕವಾಗಿದೆ. ಈ ದೇಗುಲದ ಕಂಬ,ಶಿವಲಿಂಗ ಮುಂತಾದ ಲಕ್ಷಣಗಳಿಂದ ಕಲ್ಯಾಣ ಚಾಲುಕ್ಯ ಕಾಲದಲ್ಲಿ ನಿರ್ಮಾಣವಾಗಿದೆಯೆಂದು ಹೇಳಬಹುದು.[೨]

**ಕಲ್ಲೇಶ್ವರ ದೇವಾಲಯ – ಪೂಜಾರಹಳ್ಳಿ**

ಈ ದೇವಾಲಯವೂ ಸಂಪೂರ್ಣ ಹಾಳಾಗಿದ್ದು, ಶಿಲ್ಪಗಳು ಮಾತ್ರ ಉಳಿದಿವೆ. ಗರ್ಭಗೃಹದಲ್ಲಿ ಶಿವಲಿಂಗ ಮತ್ತು ಸಭಾಮಂಟಪದಲ್ಲಿ ನಂದಿ ಶಿಲ್ಪಗಳಿವೆ. ಈ ದೇವಾಲಯಗಳನ್ನು ಕಣಶಿಲೆ ಬಳಸಿ ಕಟ್ಟಲಾಗಿದೆ. ಈ ದೇಗುಲದ ಸಮೀಪದಲ್ಲಿ ಮೂರು ಸಾಲುಗಳ ಒಂದು ಶಾಸನದಲ್ಲಿ ಶ್ರೀ ರತ್ನಭೂಷಣ, ಭಟಾರರ ಪ್ರಿಯಶಿಷ್ಯದ ಉಲ್ಲೇಖವಿದೆ.

**ಬಸವಣ್ಣ ದೇವಾಲಯ– ಕನ್ನಿಬೋರಯ್ಯನಹಟ್ಟಿ**

ದೇವಾಲಯ ಗರ್ಭಗೃಹ ಮಂಟಪ ಹಾಗೂ ಇತ್ತೀಚೆಗೆ ವಿಸ್ತಾರಗೊಂಡ ಮುಖ ಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಒಂದೂವರೆ ಅಡಿ ಎತ್ತರದ ನಂದಿ ಶಿಲ್ಪವಿದೆ.

ಸಭಾಮಂಟಪದಲ್ಲಿ ಕಂಬಗಳು ಸರಳ ಶೈಲಿಯಲ್ಲಿದ್ದು ಚಚ್ಚೌಕವಾಗಿದೆ. ಮುಖಮಂಟಪಕ್ಕೆ ಕೆಂಪು ಹೆಂಚುಗಳನ್ನು ಹೊದಿಸಲಾಗಿದೆ. ಗರ್ಭಗೃಹದ ಮೇಲಿರುವ ಸ್ಥಳೀಯ ಮಾದರಿಯ ಶಿಖರವಿದೆ. ಶಿವ, ಪಾರ್ವತಿ ನಂದಿ ಮತ್ತಿತರ ಗಾರೆ ಶಿಲ್ಪಗಳನ್ನು ಮೂಡಿಸಿ ಅಳವಡಿಸಲಾಗಿದೆ. ದೇವಾಲಯದ ಬಲಬದಿಯ ಗುಡ್ಡದ ಮೇಲೆ ಪಾಳೆಯಗಾರರ ಕಾಲದ ಕೋಟೆಯ ಅವಶೇಷಗಳಿವೆ. ದೇಗುಲದ ಲಕ್ಷಣಗಳಿಂದ ಪಾಳೆಯಗಾರರು ತಮ್ಮ ಅವಧಿಯಲ್ಲಿ ಕಟ್ಟಿಸಿದ್ದಾರೆಂಬುದು ಸ್ಪಷ್ಟವಾಗುತ್ತದೆ.

**ಸಿದ್ದಲಿಂಗೇಶ್ವರ ದೇವಾಲಯ – ಕುಮತಿ**

ಸಿದ್ದಲಿಂಗ ಯತಿಗಳ ಗದ್ದುಗೆಯಿಂದ ಈ ದೇಗುಲವೂ ಗರ್ಭಗೃಹ, ಸಭಾ ಮಂಟಪಗಳನ್ನು ಒಳಗೊಂಡಿದೆ. ಗದ್ದುಗೆಯು ಎರಡು ಅಡಿ ಎತ್ತರವಾಗಿದ್ದು, ಅದರ ಮೇಲ್ಭಾಗದಲ್ಲಿ ಶ್ರೀಗಳ ಚಚ್ಚೌಕ ಹಾಗೂ ಅಷ್ಟಮುಖಗಳಲ್ಲಿ ಕೆತ್ತಲಾಗಿದೆ. ಗರ್ಭಗೃಹದಮೇಲೆ ಎರಡು ತಲಗಳುಳ್ಳ ಶಿಖರವಿದೆ. ಎರಡು ತಲಗಳಲ್ಲೂ ದೇಗುಲದ ವಾಸ್ತು ಅಲಂಕಾರಣೆ ಹಾಗೂ ಕೀರ್ತಿ ಮೂಲಗಳಿವೆ. ಶಿಖರದ ತುದಿಯಲ್ಲಿ ಲೋಹದ ಕಳಸವನ್ನಿರಿಸಲಾಗಿದೆ.

ಕುಮತಿ ಬಳಿ ಚಿನ್ನಹಗರಿ ನದಿ ಮಧ್ಯದಲ್ಲಿ ಮಧ್ಯ ಮರದ ಗಂಗಮ್ಮನ ಗುಡಿಯಿದೆ. ತೆರದಮಂಟಪದಲ್ಲಿ ದೇವಿಯ ಮೂರ್ತಿ ಇದೆ.ಎಡಭಾಗದಲ್ಲಿ ಈಶ್ವರದೇವಾಲಯವಿದೆ.ಗರ್ಭಗೃಹ ಮತ್ತು ನವರಂಗವನ್ನು ಹೊಂದಿದೆ.ಗರ್ಭಗೃಹದಲ್ಲಿ ಶಿವಲಿಂಗವಿದೆ. ಮುಂದೆ ಬಸಣ್ಣನ ವಿಗ್ರಹವಿದೆ, ಗ್ರಾನೈಟ್ ಶಿಲೆಯಿಂದ ದೇವಾಲಯವನ್ನು ನಿರ್ಮಿಸಲಾಗಿದೆ. ಕಂಬಗಳಲ್ಲಿ ಯಾವುದೇ ಕೆತ್ತನೆಗಳಿಲ್ಲ ಬಲದಂಡೆಯಲ್ಲಿ ಸಿದ್ದಲಿಂಗೇಶ್ವರ ದೇವಾಲಯವಿದೆ.ಗರ್ಭಗುಡಿಯಲ್ಲಿ ಶಿವಲಿಂಗವಿದೆ. ನಂತರ ಅಂತರಾಳ, ಸಭಾ ಮಂಟಪದಲ್ಲಿ ಯಾವುದೇ ಕೆತ್ತನೆಗಳಿಲ್ಲ. ಕಂಬಗಳನ್ನು ಗ್ರಾನೈಟ್ ಶಿಲೆಯಿಂದ ಕೆತ್ತಲಾಗಿದೆ. ದೇವಾಲಯ ಸುತ್ತಲೂ ಪೌಳಿ ಗೋಡೆ ಇದೆ. ಮುಂದೆ ಎರಡು ತುರುಕಾಳಗ ನಡೆದ ವೀರಗಲ್ಲುಗಳಿವೆ. ಪಕ್ಕದ ಸಮಾಧಿಯ ಮೇಲೆ ಪಾದಗಳಿದ್ದು ಪಾದಗಳನ್ನು ಹಾವು ಸುತ್ತುವರಿದಿದೆ. ಹಾವಿನ ಸುತ್ತಲೂ ಚೇಳು, ಟಗರು, ಸ್ತ್ರೀ ಕೆತ್ತನೆಗಳಿವೆ. ಬಹುಶಃ ಸಮಾಧಿಯಲ್ಲಿರುವವರ ರಕ್ಷಣೆಗೆ ಇವುಗಳನ್ನು ಬಿಡಿಸಿರಬಹುದೆಂದು ತಿಳಿಯುತ್ತದೆ. ಪಕ್ಕದಲ್ಲಿ ಇನ್ನೊಂದು ಸಮಾಧಿ ದೇವಾಲಯದ ಮಾದರಿಯಲ್ಲಿದೆ. ಮುಂದೆ ದೀಪ ಸ್ತಂಭವಿದೆ. ದೇವಾಲಯ ಹಾಳಾಗಿದ್ದು ಗರ್ಭಗೃಹದಲ್ಲಿ ಸಮಾಧಿ ಇದೆ. ಇಲ್ಲಿಯೂ ಸಮಾಧಿ ಮೇಲೆ ಪಾದಗಳಿದ್ದು ಅದೇ ಮಾದರಿಯ ಚಿತ್ರಗಳಿವೆ. ಸಮಾಧಿಯ ಎಡಭಾಗದಲ್ಲಿ ಕುದುರೆ ಸವಾರನಾಗಿರುವ ವೀರಯೋಧನ ಕೆತ್ತೆನೆ ಇದೆ ಅದರ ಪಕ್ಕದಲ್ಲಿ ಕಲ್ಲು ಇರುವುದನ್ನು ಕಾಣಬಹುದು.

**ಮಲ್ಲಿಕಾರ್ಜುನ ದೇವಾಲಯ – ನುಂಕೇಮಲೆ**

ನುಂಕಮಲೆಯಲ್ಲಿರುವ ಮಲ್ಲಿಕಾರ್ಜನ ದೇವಾಲಯವನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಿದ್ದು ಇದೊಂದು ದ್ವಿಕೂಟಚಲ ರಚನೆಯಾಗಿದೆ. ಈ ದೇವಾಲಯವು ಗರ್ಭಗೃಹ, ಅರ್ಧ ಮಂಟಪ

ನವರಂಗಗಳನ್ನೊಳಗೊಂಡಿದೆ. ಪೂರ್ವಾಭಿಮುಖವಾದ ಚೌಕಾಕಾರದ ಗರ್ಭಗೃಹದಲ್ಲಿರುವ ಪೀಠದ ಮೇಲೆ ಶಿವಲಿಂಗವಿದೆ. ಬಾಗಿಲು ವಾಡದ ಲಲಾಟದಲ್ಲಿ ಗಜಲಕ್ಷ್ಮೀ, ಪೇಧ್ಯ ಭಾಗದಲ್ಲಿ ಕಂಬಗಳ ಕೆತ್ತನೆಗಳಿವೆ. ಈ ಎರಡು ಗರ್ಭಗೃಹಗಳಿಗೆ ಹೊಂದಿಕೊಂಡು ಒಂದು ಮುಚ್ಚಿದ ನವರಂಗವಿದೆ. ನವರಂಗದ ಸುತ್ತಲೂ ಒಳಗೋಡೆಗೆ ಹೊಂದಿಕೊಂಡ ಕಕ್ಷಾಸನಗಳಿವೆ. ಈ ನವರಂಗದ ಮಧ್ಯದಲ್ಲಿ ಚೌಕಾಕಾರದ ವೇದಿಕೆಯ ಮೇಲೆ ಪಶ್ಚಿಮಾಭಿಮುಖವಾಗಿರುವ ಕರಿಶಿಲೆಯ ನಂದಿ ವಿಗ್ರಹವಿದೆ. ಇಲ್ಲಿರುವ ನಾಲ್ಕು ಕಂಬಗಳನ್ನು ಪೀಠ ದಂಡ, ದಂಡಾಗ್ರ, ಕುಂಭ, ಫಲಕಗಳಲ್ಲದೆ ಸರಳವಾದ ಭೋದಿಗೆಗಳಿವೆ. ಈ ದೇವಾಲಯದ ಅದಿಷ್ಠಾನವೂ ಕಪೋತ ತ್ರಿಪಟ್ಟ ಕಮುದಗಳಿಂದ ಅಲಂಕೃತಗೊಂಡಿದ್ದು, ಸ್ವಲ್ಪ ಭಾಗ ಭೂಮಿಯಲ್ಲಿ ಹೂತುಹೋಗಿದೆ. ಈ ದೇವಾಲಯದ ಮೇಲಿನ ಶಿಖರದ ಭಾಗವು ಸರಳವಾಗಿದ್ದು, ಇದು ಕಲ್ಯಾಣಿ ಚಾಲುಕ್ಯರ ನಿರ್ಮಿತಿಯಾಗಿದೆ. ಕನ್ನಡದ ಕವಿ ಮಹಾಲಿಂಗರಂಗನು ಈ ನುಂಕೆಮಲೆಯ ಮಲ್ಲಿಕಾರ್ಜುನ ಭಕ್ತನೆಂದು ತಿಳಿದು ಬರುತ್ತದೆ.[೪]

**ತ್ರಿಶಂಕೇಶ್ವರ ದೇವಾಲಯ**

ಬ್ರಹ್ಮಗಿರಿ ಬೆಟ್ಟದಲ್ಲಿರುವ ತ್ರಿಶಂಕೇಶ್ವರ ದೇವಾಲಯವನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಈ ದೇವಾಲಯವು ಗರ್ಭಗೃಹ, ಸುಖವಾಸಿ ತೆರೆದ ನವರಂಗಗಳನ್ನೊಳಗೊಂಡಿದೆ. ಚೌಕಾಕಾರದ ಗರ್ಭಗೃಹದಲ್ಲಿ ಶಿವಲಿಂಗವಿದ್ದು, ಅದರ ಮತ್ತು ಸುಖನಾಸಿಯ ಲಲಾಟ ಬಿಂಬಗಳಲ್ಲಿ ಗಜಲಕ್ಷ್ಮೀಯರ ಕೆತ್ತನೆಗಳಿವೆ. ಅನುಕ್ರಮವಾಗಿ ಇವುಗಳ ಬಾಗಿಲವಾಡಗಳ ಪೇಧ್ಯಾ ಭಾಗಗಳಲ್ಲಿ ದ್ವಾರಪಾಲಕರ ಮತ್ತು ಕುಂಭಗಳ ಅಲಂಕಾರಗಳಿದ್ದು, ಇಲ್ಲಿನ ದ್ವಾರ ಶಾಖೆಯ ಮೇಲೆ ಪತ್ರತೋರಣ ಹಾಗೂ ಆ ಶಾಖೆಗಳ ಪಕ್ಕದಲ್ಲಿ ಸಾಮಾನ್ಯ ಅಲಂಕಾರಗಳಿರುವ ಜಾಲಂದ್ರ ವಿನ್ಯಾಸಗಳಿವೆ. ತೆರೆದ ನವರಂಗದ ಸುತ್ತಲೂ ಕಕ್ಷಾಸನಗಳಿದ್ದು, ಈ ನವರಂಗದ ಮಧ್ಯದಲ್ಲಿ ವೃತ್ತಕಾರದ ವೇದಿಕೆ ಮತ್ತು ಮಿಶ್ರಿತ ಶೈಲಿಯ ನಾಲ್ಕು ನಾಲ್ಕು ಕಂಬಗಳಿವೆ. ನವರಂಗದಲ್ಲಿರುವ ಎರಡು ಕಡೆಯು ಗೋಡೆಗಳಲ್ಲಿ ಗಣಪತಿ ಮತ್ತು ವಿಷ್ಣುವಿನ ಮೂರ್ತಿ ಶಿಲ್ಪಗಳಿವೆ. ನವರಂಗದಲ್ಲಿ ಒಂದು ಶಾಸನ ಹಾಗೂ ಒಂದು ವೀರಗಲ್ಲು ಇದೆ. ಗರ್ಭಗೃಹದ ಮೇಲೆ ಮೆಟ್ಟಿಲು ಮಟ್ಟಿಲುಗಳಾಕಾರದಲ್ಲಿರುವ ಕದಂಬ ನಾಗರ ಶೈಲಿಯ ಶಿಖರವಿದ್ದು, ಅದರ ತುದಿಯಲ್ಲಿ ಸೂಪ್ತಿಯ ಅಲಂಕಾರವಿದೆ. ಈ ದೇವಾಲಯವು ಕಮ್ಮಟದುರ್ಗದ ಅರಸರ ಕಾಲದಲ್ಲಿ ನಿರ್ಮಾಣವಾದ್ದುದೆಂದು ಶಾಸನಗಳು ಇವರಗೆ ದೊರೆತ್ತಿಲ್ಲ, ಆದರೆ ಇವುಗಳು ಆ ಅರಸರ ಕಾಲದಲ್ಲಿ ನಿರ್ಮಿಸಲಾದ ಕಮ್ಮಟದುರ್ಗ ಹಾಗೂ ಹಂಪಿಯ ಹೇಮಕೂಟದಲ್ಲಿರುವ ದೇವಾಲಯಗಳ ಶೈಲಿಯನ್ನು ಹೋಲುವುದರಿಂದ ಈ ಕಾಲಮಾನವನ್ನು ನಿಗದಿಗೊಳಿಸಬಹುದು.

**ವೀರಭದ್ರ ದೇವಾಲಯ**

ಅಶೋಕ ಸಿದ್ದಾಪುರದ ವೀರಭಧ್ರ ದೇವಾಲಯವು ವಿಜಯನಗರೋತ್ತರ ಕಾಲದ್ದಾಗಿದೆ.

ಗರ್ಭಗೃಹದಲ್ಲಿ ವೀರಭದ್ರನ ಮೂರ್ತಿಶಿಲ್ಪವಿದೆ. ಸುಖನಾಸಿಯ ನಂತರ ನವರಂಗದ ಮಧ್ಯದಲ್ಲಿ ಗ್ರಾನೈಟ್ ಶಿಲೆಯ ಕಂಬಗಳಲ್ಲಿ ಪೀಠ,ದಂಡ,ದಂಡಾಗ್ರ ಕುಂಭ, ಕಂಠ ಫಲಕಗಳಲ್ಲದೆ ಸರಳ ಭೋದಿಗೆಗಳಿವೆ. ದೇವಾಲಯದ ಗರ್ಭಗೃಹದ ಮೇಲೆ ಗಚ್ಚುಗಾರೆ ಮತ್ತು ಇಟ್ಟಿಗೆಗಳಿಂದ ನಿರ್ಮಿಸಿದ ವಿಜಯನಗರೋತ್ತರ ಕಾಲದ ಶಿಖರವಿದೆ.

**ಜಟಂಗಿರಾಮೇಶ್ವರ ದೇವಾಲಯ**

ಜಟಂಗಿ ಬೆಟ್ಟದಲ್ಲಿರುವ ರಾಮೇಶ್ವರ ದೇವಾಲಯವು ಗರ್ಭಗೃಹ ನವರಂಗಗಳಿಂದ ಕೂಡಿದ ಹಾಗೂ ದೇಗುಲದ ಆವರಣದಲ್ಲಿ ವಿವಿಧ ಉಪದೇಗುಲಗಳು ದೀಪಸ್ತಂಭ ಮತ್ತು ಮಹಾದ್ವಾರಗಳನ್ನು ಒಳಗೊಂಡ ವಿಸ್ತಾರ ದೇಗುಲವಾಗಿದೆ. ಚಚ್ಚೌಕ ತಳವಿನ್ಯಾಸದ ಮೇಲೆ ಕಟ್ಟಿದ ಗರ್ಭಗೃಹದಲ್ಲಿ ಒಂದು ಅಡಿ ಎತ್ತರದ ಪಾನವಟ್ಟದ ಮೇಲೆ ಅರ್ಧ ಅಡಿ ಎತ್ತರ ಶಿವಲಿಂಗವಿದೆ. ಗರ್ಭಗೃಹದ ಮೇಲ್ಭಾವಣಿಯಲ್ಲಿ ಪದ್ಮದ ಅಲಂಕಾರಣಿಯನ್ನು ಕಡೆದಿರುವರು. ಗರ್ಭಗೃಹದ ಬಾಗಿಲು ವಾಡವು ಸರಳವಾಗಿದ್ದು ದ್ವಾರ ಬಂದದಲ್ಲಿ ಗಜಲಕ್ಷ್ಮೀಯ ಉಬ್ಬು ಕೆತ್ತನೆಯನ್ನು ಕಾಣಬಹುದು. ಅಂತರಾಳದಲ್ಲಿ ಸುಖನಾಸಿಯ ಭಾರವನ್ನು ಹೊರಲು ಎರಡು ಚಚ್ಚೌಕ ಕಂಬಗಳನ್ನು ನಿಲ್ಲಿಸಲಾಗಿದೆ. ಇವುಗಳನ್ನು ನಂತರ ಕಾಲದಲ್ಲಿ ನಿಲ್ಲಿಸಿರುವುದು ಅಂತರಾಳದ ಮೇಲ್ಭಾವಣಿಯ ಪದ್ಮದಿಂದ ಸ್ಪಷ್ಟವಾಗುತ್ತದೆ. ಅಂತರಾಳದ ಬಾಗಿಲುವಾಡವು ಸುಂದರ ಕೆತ್ತನೆಗಳನ್ನು ಒಳಗೊಂಡಿದೆ. ಇದು ರಾಷ್ಟ್ರಕೂಟರ ಶೈಲಿಯನ್ನು ಹೊಂದಿದೆ. ಇದರಲ್ಲಿ ಅರೆಕಂಬ, ಹೂಬಳ್ಳಿ ಹಂಸ ಮತ್ತು ದ್ವಾರಪಾಲಕರಿದ್ದು, ಮೇಲ್ಭಾಗವು ಮುಂಚಾಚಿದ ಪಟ್ಟಿಕೆಗಳಿಂದ ಅಲಂಕರಣಗೊಂಡಿದೆ.

ಅಂತರಾಳದ ಮುಂಭಾಗದಲ್ಲಿ ನಾಲ್ಕು ಕಂಬಗಳು ಮತ್ತು ಒಂಭತ್ತು ಅಂಕಣಗಳನ್ನು ಹೊಂದಿದ ನವರಂಗವಿದೆ. ಇದರಲ್ಲಿ ರಾಮೇಶ್ವರ ಲಿಂಗಕ್ಕೆ ಎದುರಾಗಿ ನಂದಿಯನ್ನು ಪ್ರತಿಷ್ಠಾಪಿಸಲಾಗಿದೆ. ನಂದಿಯನ್ನು ಮೂಗುದಾರ, ಅಣೆಕಟ್ಟು, ಗಂಟೆಸಾಲುಗಳಿಂದ ಅಲಂಕರಿಸಿರುವರು. ನವರಂಗವು ನಂತರ ಕಾಲದಲ್ಲಿ ಜೀರ್ಣೋದ್ದಾರಗೊಂಡಿದೆ. ಇದಕ್ಕೆ ವಿಭಿನ್ನ ಶೈಲಿಯ ಮತ್ತು ಕಾಲದ ಕಂಬಗಳು ಬಳಕೆಗೊಂಡಿರುವುದು ಕಾರಣವಾಗಿವೆ. ಈ ಕಂಬಗಳಲ್ಲಿ ಕಲ್ಯಾಣ ಚಾಲುಕ್ಯ ಕಾಲದ ನಕ್ಷತ್ರಾಕಾರದ ಕಂಬಗಳು ಸೇರಿವೆ. ನವರಂಗದ ಮಧ್ಯದ ನಾಲ್ಕು ಕಂಬಗಳ ದಿಂಡುಗಳು ನಾಲ್ಕು ಮತ್ತು ಎಂಟು ಮುಖಗಳಲ್ಲಿದ್ದು, ಮೇಲ್ಭಾಗವು ವೃತ್ತಾಕಾರವಾಗಿದೆ. ದಿಂಡಿನ ಮೇಲೆ ಚಚ್ಚೌಕಾಕಾರದ ಫಲಕದ ಮೇಲೆ ಕಾರ್ಬೈಲ್‌ನ್ನು ಕೂಡಿಸಲಾಗಿದೆ.

ಇವುಗಳಲ್ಲದೆ ನವರಂಗದ ಸುತ್ತಲೂ ಗೋಡೆಯಲ್ಲಿ ಕಂಬಗಳಿವೆ. ನಕ್ಷತ್ರಾಕಾರದ ಮತ್ತು ತಿರುಗಣಿ ಯಂತ್ರದಿಂದ ಮಾಡಿದ ವೃತ್ತಾಕಾರದ ಕಂಬಗಳು ಸೇರಿವೆ. ನಕ್ಷತ್ರಾಕಾರದ ಕಂಭಗಳು ಅಷ್ಟಮುಖ ಕ್ಯೂಬಿಕಲ್ ಮೌಲ್ಡಿಂಗ್ ಹಾಗು ವೃತ್ತಾಕಾರದ ದಿಂಡುಗಳಿಂದ ಕೂಡಿದೆ.

ತಿರುಗಣಿಯಂತ್ರದಿಂದ ಮಾಡಿದ ಕಂಭಗಳು ವೃತ್ತಾಕಾರವಾಗಿದ್ದು ತುಂಬ ನಯವಾಗಿವೆ. ಈ ಕಂಭಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಚಾಲುಕ್ಯ ಕಾಲದ ದೇವಾಲಯವೆಂದು ಸ್ಪಷ್ಟವಾಗುತ್ತದೆ. ದೇವಾಲಯಕ್ಕೆ ಮೂರು ದ್ವಾರಗಳಿದ್ದು ಅವುಗಳಲ್ಲಿ ಉತ್ತರ ದಿಕ್ಕಿನ ಬಾಗಿಲನ್ನು ಈಗ ಮುಚ್ಚಲಾಗಿದೆ. ಪೂರ್ವಾಭಿಮುಖವಾಗಿರುವ ಬಾಗಿಲು ಮುಖ್ಯದ್ವಾರವಾಗಿದೆ.

ಗರ್ಭಗೃಹದ ಮೇಲೆ ದ್ರಾವಿಡ ಮಾದರಿಯ ತ್ರಿತಲ ಶಿಖರವಿದೆ. ಶಿಖರದ ಮುಂಭಾಗದಲ್ಲಿ ಮುಂಚಾಚಿರುವ ಸುಖನಾಸಿಯಿದೆ. ಗರ್ಭಗೃಹದ ಹೊರಬತ್ತಿಯಲ್ಲಿ ಅರೆಕಂಬ ಕೂಡುಗಳಿದ್ದು,ಕಪೋತದ ಕೆಳಗೆ ಗಿಳಿಗಳ ಸಾಲನ್ನು ಸುತ್ತಲು ಕಾಣಬಹುದು. ಪ್ರಾಕೃತಿಕವಾಗಿ ಮಳೆಯಿಂದ ದೇಗುಲದ ಗೋಡೆಯನ್ನು ರಕ್ಷಿಸಲು ಮುಂಚಾಚಿದ ಕಪೋತವನ್ನು ರಚಿಸಲಾಗಿದೆ. ಕಪೋತದ ಮೇಲೆ ಶಾಲ–ಕೂಟ ಪಂಜರಗಳ್ಳುಳ್ಳ ಹಾರವಿದ್ದು ದ್ವಿತಲ ಮತ್ತು ತ್ರಿತಲಗಳನ್ನು ಅರೆಗಂಬ ಕೂಡುಗಳಿಂದ ಅಲಂಕರಿಸಿರುವರು. ಮೇಲ್ಭಾಗದಲ್ಲಿ ಮುಚ್ಚಿದ ಬೋಗುಣಿಯಾಕಾರದ ಶಿಖರವಿದ್ದು ಅದರ ಮೇಲೆ ಕಳಶವಿದೆ. ಹಿಂದೆ ಲೋಹದ ಕಳಶವನ್ನು ತೆಗೆದು ಸುಟ್ಟ ಮಣ್ಣಿನ ಮಡಿಕೆಯನ್ನು ಬೋರಲಾಗಿ ಕಳಶದಂತೆ ಇಡಲಾಗಿದೆ. ಲೋಹದ ಕಳಸವು ಈಗ ರಾಮಸಾಗರದಲ್ಲಿದೆ. ಇದನ್ನು ಯುಗಾದಿ ಮೊದಲಾದ ಹಬ್ಬ ಹರಿದಿನಗಳ ಸಂದರ್ಭದಲ್ಲಿ ತರಲಾಗುವುದು. ನವರಂಗದ ಮೇಲ್ಛಾವಣಿಯ ನಾಲ್ಕು ಮೂಲೆಗಳಲ್ಲಿ ಇತ್ತೀಚಿಗೆ ರಚಿಸಲಾದ ನಂದಿಯ ಮೂರ್ತಿಗಳಿವೆ. ಈ ದೇವಾಲಯದ ಆವರಣದಲ್ಲಿ ಹಲವು ಚಿಕ್ಕ ಚಿಕ್ಕ ದೇವಾಲಯಗಳಿವೆ. ಮುಂಭಾಗದಲ್ಲಿ ಸೂರ್ಯ ಪಂಪಾವತಿ, ಓಂಕಾರೇಶ್ವರ ಮೊದಲಾದ ದೇಗುಲಗಳಿದ್ದು, ಇವೆಲ್ಲವೂ ಸೇರಿದಂತೆ ಎರಡು ಮಹಾದ್ವಾರಗಳಿವೆ.

### ಗಣೇಶ ದೇವಾಲಯ

ಜಟಂಗಿ ರಾಮೇಶ್ವರ ಬೆಟ್ಟದಲ್ಲಿರುವ ಗಣೇಶ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳಿಂದ ಕೂಡಿದೆ. ಗರ್ಭಗೃಹವು ಚಚ್ಚೌಕವಾಗಿದ್ದು ಸರಳ ಶೈಲಿಯ ಕಂಬಗಳಿಂದ ಮುಚ್ಚಿ ಇಟ್ಟಿಗೆಯಲ್ಲಿ ಶಿಖರವನ್ನು ಅಲಂಕರಣೆ ಮಾಡಿದ್ದು ಈಗ ಹಾಳಾಗಿ ಇಟ್ಟಿಗೆಗಳು ಮಾತ್ರ ಉಳಿದಿವೆ. ಗರ್ಭಗೃಹದಲ್ಲಿ ಮೂರು ಅಡಿ ಎತ್ತರದ ಗಣೇಶ ಶಿಲ್ಪವಿದೆ. ಈ ಶಿಲ್ಪದ ವೈಶಿಷ್ಟವೆಂದರೆ ಎರಡು ಕೈಗಳನ್ನು ಮಾತ್ರ ಹೊಂದಿರುವುದು. ದಕ್ಷಿಣ ಭಾರತದಲ್ಲಿ ದೊರೆತ ಪ್ರಾಚೀನ ಗಣೇಶ ಶಿಲ್ಪಗಳೆಲ್ಲವೂ ಸಾಮಾನ್ಯವಾಗಿ ನಾಲ್ಕು ಕೈಗಳನ್ನು ಹೊಂದಿವೆ. ಆದರೆ ಇಲ್ಲಿನ ಗಣೇಶ ಶಿಲ್ಪಗಳು ಬಾದಾಮಿಯ ಒಂದನೇಯ ಗುಹೆ, ಚೆನ್ನೈಯ ಎಗ್ಮೋರ್ ವಸ್ತು ಸಂಗ್ರಾಹಾಲಯ ಮತ್ತು ಕನ್ನಡ ವಿಶ್ವ ವಿದ್ಯಾಲಯದ ವಸ್ತು ಸಂಗ್ರಾಹಾಲಯಗಳಲ್ಲಿವೆ. ಈ ಬಗೆಯ ಎರಡು ಕೈಗಳುಳ್ಳ ಗಣೇಶ ಶಿಲ್ಪಗಳಿದ್ದರೂ ತುಂಬಾ ಅಪರೂಪವೇ"[೫]

ಗಣೇಶನು ಸುಖಾಸೀನವಾಗಿ ಕುಳಿತಿದ್ದು ಕರಂಡ ಮುಕುಟಧಾರಿಯಾಗಿದ್ದಾನೆ. ಎಡಗೈಯಲ್ಲಿ ಮೋದಕ,ಬಲಗೈಯಲ್ಲಿ ಲೇಖನಿಗಳನ್ನು ಹಿಡಿದಿದ್ದು, ಸರ್ಪವು ಹೊಟ್ಟೆಯನ್ನು ಸುತ್ತುವರಿದಿದೆ. ಸೊಂಡಿಲು ಮೋದಕವನ್ನು ಮೂಸುತ್ತಿದೆ. ವಿವಿಧ ಆಭರಣಗಳಿಂದ ಅಲಂಕೃತನಾದ ಗಣೇಶ ಕೈಬಳೆ ಕಾಲ್ಕಡಗಳು, ಕೊರಳಲ್ಲಿ ಕಂಠಹಾರಗಳನ್ನು ಧರಿಸಿರುವನು. ಈ ಶಿಲ್ಪದ ಲಕ್ಷಣಗಳನ್ನಾಧರಿಸಿ ವಿದ್ವಾಂಸರು ಕ್ರಿ.ಶ. ೧೦–೧೧ನೇ ಶತಮಾನದಲ್ಲಿ ನೊಳಂಬರ ಕಾಲದಲ್ಲಿ ಪ್ರತಿಷ್ಠಾಪಿಸಲಾದ ಶಿಲ್ಪವಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಗಣೇಶ ಶಿಲ್ಪದ ಎಡತುದಿಯಲ್ಲಿ ಭೈರವನ ಚಿಕ್ಕ ಶಿಲ್ಪವೊಂದಿದೆ, ಭೈರವ ತನ್ನ ನಾಲ್ಕು ಕೈಗಳಲ್ಲಿ ತ್ರಿಶೂಲ ಡಮರು,ಖಡ್ಗ ಮತ್ತು ಅಕ್ಷಯ ಪಾತ್ರೆಗಳನ್ನು ಹಿಡಿದಿದ್ದಾನೆ.

**ಕೇದಾರೇಶ್ವರ ದೇವಾಲಯ**

ಗರ್ಭಗುಡಿಯಲ್ಲಿ ಅರ್ಧ ಅಡಿ ಎತ್ತರದ ಪೀಠದ ಮೇಲೆ ೧ ½ ಅಡಿ ಎತ್ತರದ ಕಪ್ಪು ಶಿಲೆಯಲ್ಲಿ ಕಡೆದ ಶಿವಲಿಂಗವಿದೆ. ಅದರ ಮುಂಭಾಗದಲ್ಲಿ ಒಂದೂವರೆ ಅಡಿ ಎತ್ತರದ ನಂದಿಯ ಶಿಲ್ಪವನ್ನು ಪ್ರತಿಷ್ಠಾಪಿಸಲಾಗಿದೆ. ಈ ಶಿವಲಿಂಗವನ್ನು ಸ್ಥಳೀಯರು ಕೇದಾರೇಶ್ವರನೆಂದು ಕರೆಯುತ್ತಾರೆ. ಗರ್ಭಗೃಹದ ದ್ವಾರಬಾಗಿಲಲ್ಲಿ ಶೈವ ದ್ವಾರಪಾಲಕರ ಉಬ್ಬು ಶಿಲ್ಪಗಳಿವೆ. ದ್ವಾರಪಾಲಕರು ತಮ್ಮ ನಾಲ್ಕು ಕೈಗಳಲ್ಲಿ ತ್ರಿಶೂಲ, ಡಮರು,ಗದೆಗಳನ್ನು ಹಿಡಿದಿದ್ದು, ಇನ್ನೊಂದು ಕೈಯನ್ನು ಸೊಂಟದ ಮೇಲೆ ಇಟ್ಟುಕೊಂಡಿರುವರು ಗರ್ಭಗೃಹದ ದ್ವಾರಬಂಧವನ್ನು ಗಜಲಕ್ಷ್ಮೀಯ ಉಬ್ಬುಶಿಲ್ಪ ಹಾಗೂ ಮೇಲ್ಭಾಗದಲ್ಲಿ ಮುಂಚಾಚಿದ ಪಟ್ಟಿಕೆ ಮತ್ತು ಹೂ ಮೊಗ್ಗಿನ ರಚನೆಗಳಿಂದ ಅಲಂಕರಿಸಿರುವರು.[೬]

**ಭೋಗೇಶ್ವರ ದೇವಾಲಯ**

ದೇವಸಮುದ್ರದಲ್ಲಿರುವ ಭೋಗೇಶ್ವರ ದೇವಾಲಯವು ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳನ್ನು ಒಳಗೊಂಡಿದೆ. ಕಣಶಿಲೆಯನ್ನು ಬಳಸಿ ಕಟ್ಟಲಾದ ಈ ದೇಗುಲವನ್ನು ಸ್ಥಳೀಯರು ಭೋಗಪ್ಪನ ಗುಡಿಯೆಂದು ಕರೆಯುತ್ತಾರೆ.

ಗರ್ಭಗೃಹದಲ್ಲಿ ಯಾವುದೇ ಶಿಲ್ಪವಿಲ್ಲ ಪೀಠ ಮಾತ್ರ ಉಳಿದಿದೆ. ಇದರ ಬಾಗಿಲು ವಾಡದ ಎರಡೂ ಕಡೆ ಫಲಭರಿತ ಕುಂಭಗಳ ಉಬ್ಬುಗೆತ್ತನೆಗಳನ್ನು ಕಡೆಯಲಾಗಿದೆ. ಅಂತರಾಳದ ಬಾಗಿಲುವಾಡವು ಸರಳವಾಗಿದ್ದು, ಯಾವುದೇ ಬಗೆಯ ಅಲಂಕರಣ ಇರುವುದಿಲ್ಲ. ಅಂತರಾಳದ ಮುಂಭಾಗದಲ್ಲಿ ತೆರೆದ ಸಭಾಮಂಟಪ ಅದರಲ್ಲಿ ಒಟ್ಟು ಹದಿನಾಲ್ಕು ಕಂಬಗಳಿವೆ. ವಿಜಯನಗರ ಶೈಲಿಯ ಈ ಕಂಬಗಳು ಚಚ್ಚೌಕ ಹಾಗು ಅಷ್ಟಮುಖಗಳಲ್ಲದೆ ಕಂಬದ ಮೇಲೆ ಯಾವುದೇ ಉಬ್ಬುಶಿಲೆಗಳು  ಇರುವುದಿಲ್ಲ. ಸಭಾಮಂಟಪದ ಮೇಲ್ಛಾವಣಿಯಲ್ಲಿ ಅಷ್ಟಕೋನಾಕಾರದಲ್ಲಿ ಕೂಡಿಸಿದ ಹಾಗೂ ಪದ್ಮದ ರಚನೆಯಿರುವ ಭುವನೇಶ್ವರಿಯಿದೆ ಗರ್ಭಗೃಹದ ಮೇಲೆ ಶಿಖರವಿಲ್ಲ.

**ಪರಮೇಶ್ವರ ಮಠ**

ದೇವಸಮುದ್ರ ಗ್ರಾಮದ ಪಶ್ಚಿಮಕ್ಕೆ ರಾಂಪುರ ರಸ್ತೆಯಲ್ಲಿರುವ ಪ್ರಸಿದ್ಧ ಮಠವಿದು. ಪರಮೇಶ್ವರ ಸ್ವಾಮಿಗಳ ಗದ್ದುಗೆಯಿರುವ ಈ ಮಠವು ಗರ್ಭಗೃಹ ಹಾಗೂ ತೆರೆದ ಸಭಾಮಂಟಪಗಳನ್ನು ಹೊಂದಿದೆ. ಗರ್ಭಗೃಹದಲ್ಲಿ ಸ್ವಾಮಿಗಳ ಗದ್ದುಗೆಯಿದೆ. ಸಭಾಮಂಟಪದಲ್ಲಿ ಹದಿನೆಂಟು ಕಂಬಗಳಿವೆ. ಇವುಗಳನ್ನು ಚಚ್ಚೌಕವಾಗಿ ಕಡೆದಿರುವರು. ಗರ್ಭಗೃಹದ ಸುತ್ತಲೂ ಭಕ್ತಾದಿಗಳಿಗೆ ಪ್ರದಕ್ಷಿಣೆಗಾಗಿ ಸ್ಥಳಾವಾಕಾಶವನ್ನು ಮಾಡಿಕೊಡಲಾಗಿದೆ. ಗರ್ಭಗೃಹ ಮೇಲ್ಭಾಗದಲ್ಲಿ ದ್ರಾವಿಡ ಮಾದರಿಯ ದ್ವಿತಲವುಳ್ಳ ಶಿಖರವಿದೆ. ಶಿಖರವನ್ನು ಗಾರೆಗಚ್ಚುಗಳನ್ನು ಬಳಸಿ ನಿರ್ಮಿಸಿದ್ದು, ಮೇಲೆ ಲೋಹದ ಕಳಸವನ್ನು ಇಡಲಾಗಿದೆ. ಶಿಖರದಲ್ಲಿ ಗಾರೆಗಚ್ಚಿನ ವಿವಿಧ ಮೂರ್ತಿಶಿಲ್ಪಗಳಿವೆ. ಸಭಾಮಂಟಪದ ಮೇಲೂ ನಂದಿಯ ಶಿಲ್ಪಗಳನ್ನು ಸ್ಥಾಪಿಸಲಾಗಿದೆ. ಈ ಮಠವು ವಿವಾಹ ಮೊದಲಾದ ಉಪಯುಕ್ತ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಹೆಚ್ಚು ಪ್ರಸಿದ್ಧಿ ಹೊಂದುತ್ತಿದೆ.ಶುಭ ಕಾರ್ಯಕ್ರಮಗಳಿಗೆಂದೇ ಇತ್ತೀಚಿಗೆ ಕಲ್ಯಾಣ ಮಂಟಪವನ್ನು ಕಟ್ಟಿಸಲಾಗಿದೆ.

**ವೈಷ್ಣವ ದೇವಾಲಯಗಳು**

ಓಬಳದೇವರ ಗುಡಿಯು ಓಬಳದೇವರ ಗುಡ್ಡದಲ್ಲಿದೆ. ಈ ದೇವಾಲಯವು ಗರ್ಭಗೃಹ ಮತ್ತು ಸಭಾಮಂಟಪಗಳನ್ನು ಹೊಂದಿದ್ದು ಇದನ್ನು ಇತ್ತಿಚಿಗೆ ಕಟ್ಟಲಾಗಿದೆ. ಸಭಾಮಂಟಪದಲ್ಲಿ ದುಂಡಾದ ಕಂಬಗಳಿವೆ. ಗರ್ಭಗೃಹದಲ್ಲಿ ಓಬಳಸ್ವಾಮಿ ವಿಗ್ರಹವಿದೆ. ಈ ದೇವಾಲಯವನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದೆ. ಗರ್ಭಗುಡಿಯ ಮೇಲೆ ಯಾವುದೇ ಶಿಖರ ಕಂಡುಬರುವುದಿಲ್ಲ

**ಲಕ್ಷ್ಮೀವೆಂಕಟೇಶ್ವರ ದೇವಾಲಯ – ದೇವಪುರದಹಟ್ಟಿ**

ದೇವಾಲಯವು ಗರ್ಭಗೃಹ, ಸಭಾಮಂಟಪದಲ್ಲಿ ದುಂಡನೆಯ ಕಂಬಗಳಿವೆ. ಗರ್ಭಗೃಹದಲ್ಲಿ ವೆಂಕಟೇಶ್ವರನ ವಿಗ್ರಹವಿದೆ. ಸಭಾಮಂಟಪದಲ್ಲಿ ಮೂರ್ತಿಶಿಲ್ಪಗಳಿವೆ. ಮುಂದೆ ದೀಪಸ್ತಂಭವಿದೆ. ಗರ್ಭಗುಡಿಯ ಮೇಲೆ ಶಿಖರವಿದೆ. ಪ್ರಾಂಗಣದಲ್ಲಿ ವಸತಿಗಳಿವೆ. ದೇವಾಲಯದ ಹಿಂದೆ ಶ್ರೀ ಮಹಾನ್ ಸದ್ಗುರು ನಾನಾ ಸಾಥ್ ಬಾವಾಜಿ ದೇವಾಲಯವಿದೆ.ಪಕ್ಕದಲ್ಲಿ ರಾಮ ಸೀತಾ ದೇವಾಲಯ ಹಿಂಭಾಗದಲ್ಲಿ ಈಶ್ವರ ವಿಗ್ರಹ ಸಪ್ತ ಮಾತೃಕೇಯರ ವಿಗ್ರಹಗಳು ಕಂಡುಬರುತ್ತವೆ. ಇವೆಲ್ಲವು ಆಧುನಿಕ ಕಾಲದಲ್ಲಿ ನಿರ್ಮಾಣವಾಗಿದ್ದು ಸರಳ ಶೈಲಿಯಲ್ಲಿವೆ.

**ಗಂಜಿಗಟ್ಟೆ**

ಗಾದ್ರಿಪಾಲನಾಯಕನ ದೇವಾಲಯದ ಗರ್ಭಗೃಹದೊಳಗೆ ಗಾದ್ರಿಪಾಲನಾಯಕನ ಏಕಶಿಲೆಯಿದೆ. ಇದರಲ್ಲಿ ಗಾದ್ರಿಪಾಲನಾಯಕನ ಸತಿಯರಾದ ಕೆಂಚವ್ವ,ಕಾಮವ್ವ

ಕೋರಲಮಲ್ಲನಾಯಕ, ಚಿನ್ನಪಾಲನಾಯಕ ಒಂದು ಹಸು ಒಂದು ಹುಲಿಯ ಚಿತ್ರವನ್ನು ಕಾಣಬಹುದು. ಗುಡಿಯ ಸುತ್ತಲೂ ಕಲ್ಲಿನಗೋಡೆ ಇದೆ. ಇದರ ಹೊರಗಡೆ ೧೨-೧೪ ಅಡಿ ಎತ್ತರ ಇರುವ ದೀಪಸ್ತಂಭವನ್ನು ಕಾಣುತ್ತವೆ. ದೇವಸ್ಥಾನದ ಮುಂದೆ ಹೊಂಡವಿದೆ. ಇದರಲ್ಲಿ ಗಾದ್ರಿ ಪಾಲನಾಯಕ ಹುಲಿಯೊಂದಿಗೆ ಹೋರಾಡಿ ಮರಣಹೊಂದಿದ ನಂತರ ಈ ಹೊಂಡದಲ್ಲಿ ಕೆಂಚವ್ವ,ಕಾಮವ್ವ ಸಹಗಮನ ಪದ್ದತಿ ಅನುಸರಿಸಿ ಹೊಂಡಕ್ಕೆ ಹಾರಿದರೆಂದು ಹಿರಿಯರು ಅಭಿಪ್ರಾಯಪಡುತ್ತಾರೆ. ಮುಂದೆ ಗಂಜೆಗಟ್ಟೆಯಿಂದ ಸುಮಾರು ೩-೪ ಕಿ.ಮಿ ದೂರದಲ್ಲಿ ಮಿಂಚೇರಿ ಹಳ್ಳವಿದೆ. ಇದೊಂದು ಮಹತ್ವ ಪೂರ್ಣವಾದ ಸ್ಥಳ. ಗಾದ್ರಿ ಪಾಲನಾಯಕ ನೆಲೆಗೊಂಡು ಸಮಾಧಿಯಾಗಿರುವ ಸ್ಥಳ. ಇವನ ಸಮಾಧಿಯೆಂದು ಒಂದು ಕಲ್ಲಿನ ಗುಡ್ಡೆ(ರಾಶಿ)ಯನ್ನು ತೋರಿಸುತ್ತಾರೆ. ಅಲ್ಲದೆ ಒಂದು ಹಸುವಿನ ಸಮಾಧಿ ಹುಲಿಯ ಸಮಾಧಿಯೆಂದು ಎರಡು ಕಲ್ಲಿನ ಗುಡ್ಡೆಗಳನ್ನು ತೋರಿಸುತ್ತಾರೆ. ಈ ಸಮಾಧಿಗಳನ್ನು ನೋಡಲು ಹೋದವರು ಒಂದೊಂದು ಕಲ್ಲನ್ನು ಹಾಕಿರಬೇಕೆಂಬ ನಂಬಿಕೆ ಇದೆ. ಕಾರಣ ಈ ಸಮಾಧಿಗಳು ಅಳಿಯದೆ ಇರಬೇಕೆಂಬ ಉದ್ದೇಶವಿರಬಹುದು.

**ಆಂಜನೇಯ ದೇವಾಲಯ – ಕಮಂಡಲಗೊಂದಿಮಲ್ಲಾಪುರ**

ಕಮಂಡಲಗೊಂದಿ ಗ್ರಾಮದ ಆಂಜನೇಯ ದೇವಾಲಯ ಈ ಭಾಗದಲ್ಲಿ ಪ್ರಸಿದ್ದವಾಗಿದೆ. ಗರ್ಭಗೃಹ, ಅಂತರಾಳ ಮತ್ತು ಸಭಾಮಂಟಪಗಳಿಂದ ಕೂಡಿದ ದೇವಾಲಯವಿದು. ಗರ್ಭಗೃಹದ ಬಾಗಿಲುವಾಡಗಳಲ್ಲಿ ದ್ವಾರಪಾಲಕರ ಉಬ್ಬುಶಿಲ್ಪಗಳಿವೆ. ಗರ್ಭಗೃಹದ ಮೇಲೆ ಗುಮ್ಮಟಾಕಾರದ ಶಿಖರವನ್ನು ನಿರ್ಮಿಸಿದ್ದಾರೆ.

ಗರ್ಭಗೃಹದಲ್ಲಿರುವ ಆಂಜನೇಯ ಶಿಲ್ಪವೂ ಸುಮಾರು ೩ ಅಡಿ ಎತ್ತರವಿದ್ದು ಕಪ್ಪುಶಿಲೆಯದು ಇಡೀ ಶಿಲ್ಪಕ್ಕೆ ಕೀರ್ತಿಮುಖದಿಂದ ಕೂಡಿದ ಕಮಾನಿನ ಅಲಂಕಾರಣವಿದೆ. ಸಭಾಮಂಟಪದ ಗೋಡೆಯಲ್ಲಿ ನಾಗಬಂಧದ ಉಬ್ಬು ಶಿಲ್ಪಗಳಿವೆ. ಪ್ರಾಂಗಣದಲ್ಲಿ ಮೂಲ ದೇವಾಲಯ ಮತ್ತು ಸಪ್ತಮಾತೃಕೆಯರ ವಿಗ್ರಹವಿದೆ. ದೇವಾಲಯದ ದ್ವಾರದ ಬಾಗಿಲು ಮೇಲೆ ಗೋಪುರವಿದೆ. ಇದು ಐದು ಅಂತಸ್ತುಗಳನ್ನು ಒಳಗೊಂಡಿದ್ದು, ರಾಮಾಯಣಕ್ಕೆ ಸಂಬಂಧಿಸಿದ ಸನ್ನಿವೇಶಗಳನ್ನು ವಿಗ್ರಹ ರೂಪದಲ್ಲಿ ಮಾಡಿದ್ದಾರೆ. ಗೋಪುರದ ಮೇಲೆ ಸ್ತೂಪಿ ಇದೆ. ಈ ದೇವಾಲಯವನ್ನು ಆಧುನಿಕ ಕಾಲದಲ್ಲಿ ನಿರ್ಮಿಸಲಾಗಿದೆ.

**ಬೋರೆದೇವರ ಗುಡಿ – ಹೂಡೇಂ**

ದೇವಾಲಯವು ಸ್ಥಳೀಯ ಕಣ ಶಿಲೆಯಿಂದ ನಿರ್ಮಾಣಗೊಂಡಿದ್ದು, ಸ್ಥಳೀಯ ಪಾಳೆಯಗಾರರ ಶೈಲಿಯನ್ನು ಹೋಲುವಂತಿದೆ. ಗರ್ಭಗುಡಿ ಸುಮಾರು ೯ ಅಡಿ ಅಗಲ ೭

ಅಡಿ ಎತ್ತರ ಮತ್ತು ೯ ಅಡಿ ಉದ್ದವನ್ನು ಹೊಂದಿದೆ. ಗರ್ಭಗುಡಿಯಲ್ಲಿ ಸುಂದರವಾದ ಮತ್ತು ದೊಡ್ಡ ಗಾತ್ರದ ಭೈರವನ ವಿಗ್ರಹವಿದೆ. ಪಕ್ಕದಲ್ಲಿ ಚಿಕ್ಕದಾದ ಗಣೇಶನ ಮೂರ್ತಿಯಿದೆ. ಇತ್ತೀಚಿಗೆ ಈ ದೇವಾಲಯಕ್ಕೆ ಬಂಡೆಗಳನ್ನು ಹಾಕಿಸಿದ್ದಾರೆ. ಇಲ್ಲಿನ ಭೈರವನನ್ನು ಸ್ಥಳೀಯರು ಬೋರೆದೇವರೆಂದು, ಬೋರುವನೆಂದು ಕರೆಯುವರು. ಶಿವನ ಅವತಾರಗಳಲ್ಲಿ ಭೈರವವೆಂಬ ಉಗ್ರರೂಪವೂ ಒಂದು. ಕರ್ನಾಟಕದಲ್ಲಿ ಬೇಡರು ಮತ್ತು ಒಕ್ಕಲಿಗರು ಹೆಚ್ಚಾಗಿ ಈ ದೇವತೆಯ ಆರಾಧಕರಾಗಿರುವರು. ಈ ಪ್ರದೇಶದಲ್ಲಿ ಕದಂಬ, ಗಂಗ, ಚಾಲುಕ್ಯ, ಹೊಯ್ಸಳ, ವಿಜಯನಗರ ಮತ್ತು ಸ್ಥಳೀಯ ಪಾಳೆಯಗಾರರು ಆಳ್ವಿಕೆ ನಡಿಸಿರುವುದು ಕಂಡುಬರುತ್ತದೆ. ಹೀಗಾಗಿ ಈ ದೇವಾಲಯದ ನಿರ್ಮಾಣಕಾರರು ಯಾರೆಂಬುದು ಖಚಿತವಾಗಿ ತಿಳಿದಿಲ್ಲ. ನಿವೇಶನ ಇತ್ಯಾದಿ ಶೈಲಿಗಳಿಂದ ಪ್ರಾಚೀನ ದೇವಾಲಯವೆಂದು ಕರೆದರೂ, ನೂರಾರು ವರ್ಷಗಳ ಹಿಂದೆ ಸ್ಥಳೀಯ ಬೇಡರ ಮುಖ್ಯಸ್ಥ ನಡುಗಡ್ಡೆಯವರು ಜೀರ್ಣೋದ್ಧಾರ ಮಾಡಿಸಿದ ಬಗೆಗೆ ಊಹಿಸಬಹುದಾಗಿದೆ. ಹೀಗಾಗಿ ಹಿಂದೆ ನಡುಗಡ್ಡೆ ನಾಯಕ ಕಟ್ಟಿಸಿರಬೇಕೆಂಬ ಅಂಶ ಇವನು ಇಲ್ಲಿ ರಾಜ್ಯಾಳಿಕೆ ನಡೆಸಿದ ಸ್ಥಳ ಮನೆತನ, ರಾಜಧಾನಿ ಇತ್ಯಾದಿ ಸಂಗತಿಗಳು ಪರಿಶೀಲನೆಯಾಗಬೇಕಾಗಿದೆ. ವಿಷ್ಣು, ಸೂರ್ಯ, ಭೈರವ ಮತ್ತು ಜಿನ ಎಂಬ ಅಪೂರ್ವ ಶಿಲ್ಪಗಳಿವೆ"[೭] ಬೋರೆದೇವರ ವಿಗ್ರಹ ಮೂಲತ: ಇಲ್ಲಿಯದಲ್ಲವೆನ್ನುವ ಸಂಗತಿ ಕ್ಷೇತ್ರ ಕಾರ್ಯದಿಂದ ತಿಳಿದು ಬರುತ್ತದೆ. ಕೋಟೆ ಮೂರು ಬುರುಜುಗಳು ಊರ ಬಾಗಿಲು ಮತ್ತು ದೇವಾಲಯಗಳಿವೆ. ವಿಶಿಷ್ಟ ಬುಡ್ಡೆಕಲ್ಲು ಇದೆ ಇದನ್ನು ಸ್ಥಳೀಯರು 'ಯಂತ್ರದಕಲ್ಲು' ಎನ್ನುವರು.

**ವೆಂಕಟೇಶ್ವರ ದೇವಾಲಯ – ನಾಗಸಮುದ್ರ**

ವೆಂಕಟೇಶ್ವರ ದೇವಾಲಯವನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದ್ದು, ಗರ್ಭಗೃಹದಲ್ಲಿ ಯಾವುದೇ ಮೂರ್ತಿಶಿಲ್ಪವಿಲ್ಲ ಸ್ಥಳೀಯರು ಮೂರ್ತಿಯನ್ನು ಬೇರಡೆಗೆ ಸಾಗಿಸಿದ್ದಾರೆ ಎಂದು ಹೇಳುತ್ತಾರೆ. ಇಲ್ಲಿನ ಸುಖನಾಸಿಯು ಬಾಗಿಲು ವಾಡದ ಲಲಾಟ ಬಿಂಬದಲ್ಲಿ ಗಜಲಕ್ಷ್ಮಿ ಪೇದ್ಯಾ ಭಾಗದಲ್ಲಿ ದ್ವಾರಪಾಲಕ ಕೆತ್ತನೆಗಳಿವೆ. ಆದಿಷ್ಠಾನದಲ್ಲಿ ಕಪೋತಗಳ ಅಲಂಕಾರವಿದ್ದು, ಮೇಲಿನ ಭಾಗದಲ್ಲಿ ಶಿಖರವಿಲ್ಲ. ಈ ದೇವಾಲಯವು ಈಗ ಭಗ್ನ ಸ್ಥಿತಿಯಲ್ಲಿದೆ. ಈ ವೆಂಕಟೇಶ್ವರ ದೇವಾಲಯದ ಪೂರ್ವಕ್ಕೆ ಇದೇ ರೀತಿಯ ಹೋಲಿಕೆಯಿರುವ ಇನ್ನೊಂದು ಗ್ರಾನೈಟ್ ಶಿಲೆಯಿಂದ ನಿರ್ಮಿಸಿದ ಮಂಟಪವಿದೆ.

**ಕಾಲಭೈರವ (ನುಂಕೆಮಲೆ)**

ದೇವಾಲಯದ ಪೀಠದ ಮೇಲೆ (ಕರಿಶಿಲೆಗೆ ಲೋಹದಿಂದ ಮಾಡಿದ ಮುಖವಾಡವನ್ನು ಜೋಡಿಸಿರುವ) ಸಿದ್ದೇಶ್ವರ ಅಥವಾ ಗೋರಕ್ಷನಾಥ ಮೂರ್ತಿಶಿಲ್ಪವಿದೆ. ಈ ಪದ್ಮ ಪೀಠವು

ವಿವಿಧ ದೇವತೆಗಳ ಉಬ್ಬು ಕೆತ್ತನೆಯಲ್ಲದೆ ಅರಳಿದ ಪದ್ಮಪೀಠಗಳನ್ನೊಳಗೊಂಡಿದೆ. ಇಲ್ಲಿರುವ ಕಂಬಗಳ ಮೇಲಿನ ದಂಡಭಾಗದಲ್ಲಿ ನಂದಿ ಆಂಜನೇಯಗಳಲ್ಲದೆ ಕೆಲವೊಂದು ಸ್ತ್ರೀ- ಪುರುಷ ದೇವತೆಗಳ ಉಬ್ಬು ಕೆತ್ತನೆಗಳಿವೆ. ಗರ್ಭಗೃಹಕ್ಕೆ ಹೋಗುವ ಸೋಪಾನದಲ್ಲಿ ಆನೆ, ಕುದುರೆ ಮತ್ತಿತರ ಉಬ್ಬುಶಿಲ್ಪಗಳಿವೆ. ಈ ದೇವಾಲಯದ ಪ್ರವೇಶದ್ವಾರಲ್ಲಿ ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಪೇಧ್ಯಾಭಾಗದಲ್ಲಿ ದ್ವಾರಪಾಲಕರು ಅಲ್ಲದೆ ಸೋಪಾನದಲ್ಲಿ ಸಿಂಹಮುಖದ ವ್ಯಾಳಿಗಳಿವೆ. ಇಲ್ಲಿನ ದ್ವಾರ ಮಂಟಪದಲ್ಲಿರುವ ಕಂಬಗಳ ಮೇಲೆ ವಿವಿಧ ದೇವತೆಗಳ ಉಬ್ಬುಶಿಲೆಗಳ ಅಲಂಕಾರಗಳಿವೆ. ಈ ದೇವಾಲಯದ ಮೇಲಿನ ಭಾಗದಲ್ಲಿ ಗಚ್ಚುಗಾರೆಯಿಂದ ವಿವಿಧ ಅಲಂಕಾರಗಳನ್ನು ಮಾಡಲಾಗಿದ್ದು, ಸರಳವಾದ ಶಿಖರವನ್ನು ಹೊಂದಿದೆ. ಈ ದೇವಾಲಯದ ಮುಂದಿರುವ ಎರಡು ಗರುಡ ಸ್ತಂಭಗಳ ಮೇಲೆ ಒಂದು ಚಿಕ್ಕದು ಇನ್ನೊಂದು ದೊಡ್ಡದಿದ್ದು ಈ ಬೆಟ್ಟದ ತುಟ್ಟತುದಿಯಲ್ಲೊಂದು ಗರುಡ ಸ್ತಂಭವಿದೆ.

ಸ್ತ್ರೀ-ಪುರುಷ ದೇವತೆಗಳ ಹಾಗೂ ಸಿಂಹಮುಖಗಳನ್ನು ಕೆತ್ತಲಾಗಿದೆ. ಈ ದೇವಾಲಯ ಪಕ್ಕದಲ್ಲಿರುವ ಗರ್ಭಗುಡಿಯಲ್ಲಿ ಕಾಲಭೈರವ ಅಥವಾ ನುಂಕಪ್ಪನ ಮೂರ್ತಿಶಿಲ್ಪವಿದೆ. ಕ್ರಿ.ಶ.೧೧-೧೧ನೇ ಶತಮಾನದಲ್ಲಿ ಕದಂಬರ ಅಜವರ್ಮನು ಚಾಲುಕ್ಯರ ಜಯಸಿಂಹನ ಅಧೀನನಾಗಿ ಆಳ್ವಿಕೆ ಮಾಡುವಾಗ ಈ ಕದಂಬ ವಂಶದ ಬಂಚರಸದೇವನು ನುಂಕೆಮಲೆಯನ್ನು ಆಳುತ್ತಿರುವಾಗ ಈ ದೇವಾಲಯವನ್ನು ಕಟ್ಟಿಸಿ ಅನೇಕ ದಾನದತ್ತಿಗಳನ್ನು ನೀಡಿದ್ದಾನೆ. ಅಜವರ್ಮ ಅಥವಾ ಜವವರ್ಮನ ಆಳ್ವಿಕೆಯಲ್ಲಿ ಮಾಳಿಕಬ್ಬೆಯ ಅರಸಿಯು ಎಡೆಯೂರು ಹೊಲದ ಬೆಳೆಯ ಉತ್ಪನ್ನದಲ್ಲಿ ನುಂಕೇಶ್ವರ ದೇವರಿಗೆ ದಾನ ನೀಡಿದಳೆಂದು ಕ್ರಿ.ಶ. ೯೮೮ರ ಇಲ್ಲಿನ ಮಲ್ಲಿಕಾರ್ಜುನ ದೇವಾಲಯ ಬಳಿಯಿರುವ ಶಾಸನವೊಂದು ತಿಳಿಸುತ್ತದೆ. ಅಲ್ಲದೆ ಈ ದೇವರ ರಂಗಭೋಗ ನೈವೇದ್ಯಕ್ಕೆ ಕದಂಬರ ಬಂಚರಸದೇವನು ಚಾಮಗೊಂಡನಹಳ್ಳಿಯನ್ನು ದತ್ತಿ ಬಿಟ್ಟ ವಿಚಾರವನ್ನು ಕ್ರಿ.ಶ. ೧೦೮೭ ಶಿಲಾಶಾಸನವು ಉಲ್ಲೇಖಿಸಿದೆ. ಉತ್ತರ ಭಾರತದಿಂದ ಬಂದ ಗೋಸಾಯಿಗಳು ಇಂದಿಗೂ ಗೋರಕ್ಷನಾಥ ದೇವರನ್ನು ಪೂಜಿಸುತ್ತಾರೆ. ಈ ಬೆಟ್ಟವು ನಾಥ ಸಂಪ್ರದಾಯಕ್ಕೆ ಸೇರಿದ ಕರ್ನಾಟಕದ ಅತ್ಯಂತ ಪ್ರಾಚೀನ ನೆಲೆಗಳಲ್ಲೊಂದಾಗಿದೆ.[೮] ಇದೇ ಬೆಟ್ಟದಲ್ಲಿರುವ ಒಂದು ಚೌಕಾಕಾರದ ಕಲ್ಲಿನ ಮಂಟಪಕ್ಕೆ ಸ್ಥಳೀಯರು 'ಮೇಗಳ ಈರ್ಲು' ಎಂದು ಕರೆಯುತ್ತಿದ್ದು, ಈ ಮಂಟಪಕ್ಕೆ ಯಾವುದೇ ರೀತಿಯ ಅಲಂಕಾರ ಮತ್ತು ಮೇಲಿನ ಭಾಗದಲ್ಲಿ ಶಿಖರಗಳಿಲ್ಲ .

**ರಾಮ ದೇವಾಲಯ - ಚಿಕ್ಕೇರಹಳ್ಳಿ**

ಈ ಪ್ರದೇಶದಲ್ಲಿ ವಿಜಯನಗರೋತ್ತರ ಕಾಲದಲ್ಲಿ ವೈಷ್ಣವ ದೇವಾಲಯಗಳು ನಿರ್ಮಾಣವಾಗಿವೆ. ರಾಮದೇವಾಲಯವೂ ದ್ವಿಕೂಟಚಲ ರಚನೆಯಾಗಿದೆ.

ಪೂರ್ವಾಭಿಮುಖವಾಗಿರುವ ಚೌಕಾಕಾರದ ಗರ್ಭಗೃಹದಲ್ಲಿ ರಾಮ, ಲಕ್ಷ್ಮಣ ಸೀತಾ ಮೂರ್ತಿಗಳಿವೆ. ಗರ್ಭಗೃಹದ ಬಾಗಿಲುವಾಡದ ಲಲಾಟಬಿಂಬದಲ್ಲಿ ಉಬ್ಬಕೆತ್ತನೆಗಳಿವೆ. ಪೇದ್ಯಾಭಾಗದಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ. ದಕ್ಷಿಣಾಭಿಮುಖವಾದ ಗರ್ಭಗೃಹದಲ್ಲಿ ಆಂಜನೇಯನ ಮೂರ್ತಿಶಿಲ್ಪವಿದೆ. ಇಲ್ಲಿನ ಲಲಾಟಬಿಂಬದಲ್ಲಿ ಗಜಲಕ್ಷ್ಮೀ ಪೇದ್ಯಾಭಾಗದಲ್ಲಿ ಕುಂಭಗಳು ದ್ವಾರ ಶಾಖೆಯ ಪಕ್ಕ ಜಾಲಾಂದ್ರಗಳು, ಲತೆಬಳ್ಳಿಗಳು ಇಲ್ಲಿನ ಅಂತರಾಳದಲ್ಲಿರುವ ಲಾಲಾಟದಲ್ಲಿಯೂ ಗಜಲಕ್ಷ್ಮೀಯ ಕೆತ್ತನೆ ಅಲ್ಲದೆ ಪುಷ್ಪ ತೋರಣವಿದೆ. ಈ ಎರಡು ಗರ್ಭಗೃಹದಲ್ಲಿ ಚೌಕಾಕಾರದ ಚೌಕ ಹಾಗು ವೃತ್ತಾಕಾರದ ಕಂಬಗಳಿವೆ. ಈ ಕಂಬಗಳು ಪೀಠ, ದಂಡ, ದಂಡಾಗ್ರ, ಕುಂಭ, ಫಲಕಗಳನ್ನೊಳಗೊಂಡಿದ್ದು, ಜೊತೆಗೆ ಸರಳವಾದ ಭೋದಿಗೆಗಳಿವೆ. ಈ ನವರಂಗದ ವಿತಾನದಲ್ಲಿ ಅರಳಿದ ಪದ್ಮವಿದೆ. ಗರ್ಭಗೃಹದ ಮೇಲೆ ವಿಜಯ ನಗರೋತ್ತರ ಕಾಲದ ಶಿಖರವಿದ್ದು, ಅದೇ ರೀತಿಯಲ್ಲಿ ಪ್ರವೇಶದ್ವಾರದಲ್ಲಿ ಮೂರು ತಲಗಳ ವಿಜಯನಗರೋತ್ತರ ಕಾಲದ ಗೋಪುರವಿದೆ. ಗಚ್ಚುಗಾರೆಯಿಂದ ನಿರ್ಮಿಸಿದ ಈ ಗೋಪುರದಲ್ಲಿ ವಿವಿಧ ಮೂರ್ತಿಶಿಲ್ಪಗಳು, ಸಿಂಹ ಮುಖದ ಪ್ರಭಾವಳಿಗಳಲ್ಲದೆ, ತುದಿಯಲ್ಲಿ ಶಾಲಾ ರಚನೆಯಿದೆ. ಮೇಲೆ ಗಮನಿಸಿದಂತೆ ದ್ವಿಕೂಟ ದೇವಾಲಯವಾಗಿರುವ ಇದನ್ನು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಿಸಿದ್ದು, ಪಾಳೆಯಗಾರರ ಅವಧಿಯಲ್ಲಿ ಜೀರ್ಣೋದ್ಧಾರಗೊಂಡಿರಬಹುದು. ಆದರೆ ಇದಕ್ಕೆ ಯಾವುದೇ ಆಧಾರಗಳಿಲ್ಲ. ಸ್ಥಳೀಯರು ಇದನ್ನು ರಾಮದೇವಾಲಯವೆಂದು ಕರೆಯುತ್ತಾರೆ.

**ವೆಂಕಟರಮಣ ದೇವಾಲಯ – ಅಮಕುಂದಿ**

ವೆಂಕಟರಮಣ ದೇವಾಲಯವೂ ವಿಜಯನಗರೋತ್ತರ ಕಾಲದಲ್ಲಿ ನಿರ್ಮಾಣವಾದ ವೈಷ್ಣವ ದೇವಾಲಯವಾಗಿದೆ. ಇದರಲ್ಲಿ ಗರ್ಭಗುಡಿ, ಸುಖನಾಸಿ ಹಾಗೂ ಸಭಾ ಮಂಟಪಗಳಿವೆ. ಚೌಕಾಕಾರದ ಗರ್ಭಗೃಹದಲ್ಲಿ ವಿಷ್ಣು ಮೂರ್ತಿಶಿಲ್ಪವು ಪದ್ಮ ಪೀಠದ ಮೇಲಿರದೆ, ಒಂದು ಮೂಲೆಯಲ್ಲಿದೆ. ಈ ಗರ್ಭಗೃಹದ ನಂತರ ಚೌಕಾಕಾರದ ಸುಖನಾಸಿಯಿದ್ದು, ಅದರ ಮುಂದಿನ ಸಭಾಮಂಟಪದ ಮೇಲೆ ಗುಚ್ಚುಗಾರೆ ಹಾಗೂ ಗರ್ಭಗೃಹದ ಮೇಲೆ ವಿಜಯನಗರೋತ್ತರ ಕಾಲದ ಶಿಖರ ಕೋಷ್ಠಕ ಪ್ರಭಾವಳಿಗಳಿದ್ದು ತುದಿಯಲ್ಲಿ ಸ್ತೂಪಿಯ ರಚನೆಯಿದೆ.

**ಶಾಕ್ತೇಯ ದೇವಾಲಯಗಳು**

ಚಿನ್ನಹಗರಿನದಿ ಪರಿಸರದಲ್ಲಿ ಹಲವಾರು ಶಾಕ್ತೇಯ ದೇವಾಲಯಗಳನ್ನು ನೋಡಬಹುದು. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

**ಕಾಳಿ ದೇವಾಲಯ – ದೇವಪುರದಹಟ್ಟಿ**

ದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ಮುಖಮಂಟಪವನ್ನು ಒಳಗೊಂಡಿದೆ. ಇದು ಇತ್ತೀಚಿನ ಕಾಲದಲ್ಲಿ ನಿರ್ಮಿಸಿದ ದೇವಾಲಯ. ಗರ್ಭಗೃಹದಲ್ಲಿ ಕಾಳಿ ವಿಗ್ರಹವಿದೆ. ಮುಖಮಂಟಪದಲ್ಲಿ ನೂತನ ಅಲಂಕರಣವಿದೆ. ಗರ್ಭಗೃಹದ ಮೇಲೆ ಗುಮ್ಮಟಾಕಾರದ ಶಿಖರವಿದೆ.

**ದ್ಯಾಮಲಾಂಬ ದೇವಾಲಯ – ಹಿರೇಗುಂಟನೂರು**

ಎತ್ತರ ಜಗತಿಯ ಮೇಲೆ ನಿರ್ಮಾಣವಾಗಿರುವ ಈ ದೇವಾಲಯ ಗರ್ಭಗೃಹ ಮತ್ತು ಸಭಾಮಂಟಪಗಳಿಂದ ಕೂಡಿದೆ. ಸರಳ ಶೈಲಿಯ ಪ್ರವೇಶದ್ವಾರವಿರುವ ಗರ್ಭಗೃಹದಲ್ಲಿ ಸುಮಾರು ನಾಲ್ಕು ಅಡಿ ಎತ್ತರದ ದ್ಯಾಮಲಾಂಬೆಯ ವಿಗ್ರಹವನ್ನು ಪ್ರತಿಷ್ಠಾಪಿಲಾಗಿದೆ. ಅದರ ಕೈಗಳಲ್ಲಿ ತ್ರಿಶೂಲ, ಡಮರು, ಖಡ್ಗ, ಗುರಾಣಿಗಳಿವೆ, ಸಭಾಮಂಟಪದ ಮಧ್ಯೆ ಚಿಕ್ಕ ನಾಲ್ಕು ಕಂಬಗಳಿವೆ. ಸರಳ ಶೈಲಿಯ ಹೊರಗೋಡೆ ಗರ್ಭಗೃಹದ ಮೇಲೆ ಚಿಕ್ಕ ಶಿಖರವಿದೆ. ದೆವ್ವವನ್ನು ಬಿಡಿಸುವ, ಫಲ ಸಂತಾನ ನೀಡುವ ಬೆಳೆಕಾಯುವ ಮನೆಕಾಯುವ ದೈವವಾಗಿ ಈಗ ಭಾಗದಲ್ಲಿ ಪೂಜಾರ್ಹಳಾಗಿದ್ದಾಳೆ.

**ಮಾರಮ್ಮ ದೇವಾಲಯ – ವಡ್ಡನಹಳ್ಳಿ**

ಚಿನ್ನಹಗರಿ ನದಿ ಬಲದಂಡೆಯಲ್ಲಿ ಬರುವ ವಡ್ಡನಹಳ್ಳಿ ಕ್ಷೇತ್ರ ಅಲ್ಲಿನ ಮಾರಮ್ಮನಿಂದ ಪ್ರಸಿದ್ದಿ ಪಡೆದಿದೆ. ನಾಯಕನಹಟ್ಟಿ ಸ್ವಾಮಿಗಳಿಗೆ ದೇವಾಲಯದಲ್ಲಿ ಬೆತ್ತ ಮತ್ತು ಜೋಳಿಗೆ ಹಿಡಿಲು ಜಾಗ ಕೊಟ್ಟಿದ್ದರಿಂದ ದೇವಾಲಯ ತುಂಬೆಲ್ಲ ಬೆತ್ತ ಮತ್ತು ಜೋಳಿಗೆಗಳಾದವು ಎಂಬ ಬಗ್ಗೆ ನಾಯಕನಹಟ್ಟಿ ತಿಪ್ಪೇಸ್ವಾಮಿ ಕಥೆಯಿಂದ ತಿಳಿಯಬಹುದು. ದೇವಾಲಯವೂ ಗರ್ಭಗೃಹ ಮತ್ತು ನವರಂಗವನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಮಾರಮ್ಮನ ವಿಗ್ರಹವಿದೆ. ನವರಂಗದ ಭಾಗದಲ್ಲಿ ಕೆಲವು ಚಿತ್ರಗಳನ್ನು ಬಿಡಿಸಿರುವುದು ಕಂಡುಬರುತ್ತದೆ. ಗರ್ಭಗುಡಿಯ ಮೇಲೆ ಯಾವುದೇ ಶಿಖರವಿಲ್ಲ.

**ಚೌಡೇಶ್ವರಿ ದೇವಾಲಯ**

ಚಿಕ್ಕಗೊಂಡನಹಳ್ಳಿಯಲ್ಲಿರುವ ದೇವಾಲಯ ತೆರೆದ ನವರಂಗದಲ್ಲಿ ೧೮ ಕಂಬಗಳಿಂದ ದೇವಾಲಯದ ಮಧ್ಯೆ ಗರ್ಭಗುಡಿಯಿದೆ. ಗರ್ಭಗುಡಿಯಲ್ಲಿ ಚೌಡೇಶ್ವರಿ ವಿಗ್ರಹವಿದೆ. ಗರ್ಭಗುಡಿಯ ಮೇಲೆ ಮೂರು ಅಂತಸ್ತುಗಳ ಶಿಖರವಿದೆ.

**ಚೌಡೇಶ್ವರಿ ದೇವಾಲಯ – ಹೂಡೇಂ**

ಇಂದು ನೇಕಾರರು ಪೂಜಿಸುವ ದೇವತೆಯಾದ ಚೌಡಮ್ಮನ ಮೂಲ ತುಂಬ ವಿಚಿತ್ರವಾಗಿದೆ.

ಈಕೆಯ ಮೂಲದ ಬಗ್ಗೆ ಜನಪದರು ಒಂದು ರೀತಿಯಿಂದ ಹೇಳಿದರೆ ಪಂಡಿತರು ಇನ್ನೊಂದು ರೀತಿಯಿಂದ ಹೇಳುವರು. ಏಳುಕೊಳ್ಳದಲ್ಲಿ ಮುಳುಗಿದ್ದ ಎಲ್ಲಮ್ಮ ಮೇಲೆಳಲಿಲ್ಲವಂತೆ, ಯಾವುದೇ ವಾದ್ಯ ತೆಗೆದುಕೊಂಡು ಬಾರಿಸಿದಾಗಲೂ ಮೇಲೆ ಬರಲಿಲ್ಲವಂತೆ, ಚೌಡಿಕೆ ವಾದ್ಯ ತೆಗೆದುಕೊಂಡು ಬಾರಿಸಿದಾಗ ಈ ವಾದ್ಯದ ನಾದಕ್ಕೆ ಸಂಪ್ರಿತಳಾಗಿ ಎಲ್ಲಮ್ಮ ಮುಳುಗಿದಾಗ ಮೇಲೆದ್ದು ಬಂದಳಂತೆ, ಅದಕ್ಕಾಗಿ ಎಲ್ಲಮ್ಮನಿಗೆ ಚೌಡಿಕೆಯಿಂದ ಚೌಡಮ್ಮನೆಂಬ ಇನ್ನೊಂದು ಹೆಸರು ಬಂತೆಂದು ಹೇಳುತ್ತಾರೆ. ಹಾವಿನ ಪೂಜೆಯಿಂದ ನಾಗದೇವತೆ ಹುಟ್ಟಿಕೊಂಡಂತೆ, ಚೋಳಿನ ಪೂಜೆಯಿಂದ ಚೋಳಮ್ಮ > ಚೌಳಮ್ಮ > ಚೌಡಮ್ಮ ಹುಟ್ಟಿಕೊಂಡಳು.

ಎತ್ತರದ ಜಗತಿಯ ಮೇಲೆ ಚಿಕ್ಕ ಗರ್ಭಗುಡಿಯಿದೆ, ಗರ್ಭಗುಡಿಯಲ್ಲಿ ಸಿಂಹ ಮೇಲೆ ಸ್ಥಳೀಯ ಮಾದರಿಯ ಶಿಖರವಿದೆ. ನಾಲ್ಕು ಕಡೆ ಸಿಂಹಗಳು, ಕೋಷ್ಠಕದಲ್ಲಿ ಗರ್ಭಗೃಹದಲ್ಲಿರುವಂತೆ ದೇವತೆಯ ಶಿಲ್ಪವಿದೆ. ಗರ್ಭಗೃಹದ ಮೇಲೆ ಗುಮ್ಮಟಾಕಾರದ ಶಿಖರವಿದೆ.

### ಕನ್ನೆರಮ್ಮ ದೇವಾಲಯ

ಹಿರೇಕೆರಹಳ್ಳಿಯಲ್ಲಿರುವ ಕನ್ನೇರಮ್ಮನ ದೇವಾಲಯವನ್ನು ಕಲ್ಯಾಣಿ ಚಾಲುಕ್ಯರ ಕಾಲದಲ್ಲಿ ನಿರ್ಮಿಸಲಾಗಿದೆ. ಇದು ಗರ್ಭಗೃಹ, ಸುಖನಾಸಿ ತೆರೆದ ನವರಂಗಗಳನ್ನೊಳಗೊಂಡಿದೆ. ಚೌಕಾಕಾರದ ಗರ್ಭಗೃಹದ ಶಿವಲಿಂಗವಿದ್ದು ಇದೊಂದು ಶೈವ ದೇವಾಲಯವಾಗಿದ್ದರೂ ಅಲ್ಲಿನ ಸ್ಥಳೀಯರು ಇದನ್ನು ಕನ್ನೇರಮ್ಮನ ದೇವಾಲಯವೆಂದು ಕರೆಯುತ್ತಾರೆ. ಇದಕ್ಕೆ ನಿರ್ದಿಷ್ಠ ಕಾರಣ ತಿಳಿದು ಬಂದಿಲ್ಲ, ಗರ್ಭಗೃಹ ಮತ್ತು ಸುಖನಾಸಿಗಳ ಲಲಾಟಗಳಲ್ಲಿ ಗಜಲಕ್ಷ್ಮೀಯ ಕೆತ್ತನೆಗಳಿವೆ. ತೆರೆದ ನವರಂಗದ ಸುತ್ತಲೂ ಕಕ್ಷಾಸನಗಳು ಅದರ ಮಧ್ಯದಲ್ಲಿ ಚೌಕಾ ವೇದಿಕೆ ಮತ್ತು ಲಂಬವಾಗಿರುವ ೪ ಚೌಕಾಕಾರದ ಕಂಬಗಳಿವೆ. ಈ ಕಂಬಗಳಿಗೆ ಪೀಠ, ದಂಡ, ದಂಡಾಗ್ರ, ಹಾಗೂ ವೃತ್ತಾಕಾರದ ಫಲಕಗಳನ್ನು ಕೊನೆಯಲ್ಲಿ ಸಾಮಾನ್ಯ ಲಕ್ಷಣದ ಭೋದಿಗೆಗಳಿವೆ. ಈ ನವರಂಗದ ಮಧ್ಯೆದಲ್ಲಿರುವ ವೇದಿಕೆಯ ಮೇಲೆ ಗರ್ಭಗೃಹದ ಲಿಂಗಕ್ಕೆ ಎದುರಾಗಿ ನಂದಿಯಿದೆ. ಪೂರ್ವಭಿಮುಖವಾಗಿರುವ ಈ ದೇವಾಲಯವನ್ನು ಗ್ರಾನೈಟ್ ಶಿಲೆಯಿಂದ ನಿರ್ಮಿಸಲಾಗಿದ್ದು ಗರ್ಭಗೃಹದ ಮೇಲೆ ಯಾವುದೇ ಶಿಖರವಿಲ್ಲ.

### ತುಪ್ಪದಮ್ಮ ದೇವಾಲಯ ದೇವರಗುಡ್ಡ

ದೇವಾಲಯವನ್ನು ಎತ್ತರದ ಜಗತಿಯ ಮೇಲೆ ನಿರ್ಮಾಣ ಮಾಡಲಾಗಿದೆ. ಗರ್ಭಗೃಹ ಮತ್ತು ತೆರೆದ ನವರಂಗವಿದೆ. ಗರ್ಭಗೃಹದಲ್ಲಿ ತುಪ್ಪದಮ್ಮನ ಮೂರ್ತಿ ಇದೆ. ಗ್ರಾನೈಟ್ ಶಿಲೆಯಿಂದ ದೇವಾಲಯವನ್ನು ನಿರ್ಮಿಸಲಾಗಿದೆ. ಸು ೩೦-೫೦ ಉದ್ದದ ದೊಡ್ಡ ಬಂಡೆಯ ಗವಿಯ ಕೆಳಗೆ ನೀರಿದ್ದರೂ ಸೋಂಕುವುದಿಲ್ಲ. ಸುಮಾರು ನಲವತ್ತೇಳು ಅಡಿ ಉದ್ದದ ಬಲುಗಟ್ಟಿಯಾದ

ಕಮರದ ಮರದ ಸಿಡಿಕಂಭವನ್ನು ಮಳೆ ಬಿಸಿಲಿಗೆ ಹಾಳಾಗದಂತೆ ಈ ದೊಡ್ಡ ಗವಿಯಲ್ಲಿಯೇ ಇರಿಸುತ್ತಾರೆ.

**ಮಹಿಷ ಮರ್ದಿನಿ ದೇವಾಲಯ**

ಜಟಂಗಿ ರಾಮೇಶ್ವರ ಬೆಟ್ಟದಲ್ಲಿರುವ ಮಹಿಷ ಮರ್ದಿನಿ ದೇವಾಲಯ ಗರ್ಭಗೃಹ ಮತ್ತು ಅಂತರಾಳಗಳನ್ನು ಒಳಗೊಂಡಿದೆ. ಗರ್ಭಗೃಹದಲ್ಲಿ ಒಂದು ಅಡಿ ಎತ್ತರದ ಪೀಠದ ಮೇಲೆ ಮೂರು ಅಡಿಗಳೆತ್ತರದ ಕಪ್ಪು ಶಿಲೆಯಲ್ಲಿ ಕಡೆದ ಸುಂದರವಾದ ಮಹಿಷ ಮರ್ಧಿನಿಯ ಶಿಲ್ಪವಿದೆ. ಮಹಿಷ ಮರ್ದಿನಿಯು ತನ್ನ ನಾಲ್ಕು ಕೈಗಳಲ್ಲಿ ಶಂಖ,ಚಕ್ರ,ತ್ರಿಶೂಲಗಳನ್ನು ಇನ್ನೊಂದು ಕೈಯಲ್ಲಿ ಮಹಿಷನ ತಲೆಯನ್ನು ಹಿಡಿದು ಕೊಲ್ಲುತ್ತಿರುವಳು. ದೇವಿಯ ವಾಹನವಾದ ಸಿಂಹವನ್ನು ಕೆಳಭಾಗದಲ್ಲಿ ಚಿತ್ರಿಸಲಾಗಿದೆ. ಮಹಿಷನನ್ನು ಸಂಹರಿಸುವ ಸಲುವಾಗಿ ಅವತರಿಸಿದ ಚಾಮುಂಡಿಯನ್ನು ಮಹಿಷ ಮರ್ದಿನಿಯೆಂದೇ ಕರೆಯಲಾಗುತ್ತದೆ.

ಕರಿಯಮ್ಮ ದೇವಾಲಯ (ಸೊಂಡೆಕೊಳ್ಳ) ಕರಿಯಮ್ಮ ದೇವಾಲಯ (ಗೊಡಬನಹಾಳ್) ಕಾಳಿಕಾಂಬ ದೇವಾಲಯ (ಹುಲ್ಲೂರು) ಕೊಲ್ಲಾಪುರದಮ್ಮ ದೇವಾಲಯ (ಕ್ಯಾಸಾಪುರ), ಓಬವ್ವ ದೇವಾಲಯ (ತಮಟಕಲ್ಲು), ಊರಮಾರಮ್ಮ ದೇವಾಲಯ (ಮಾರಮ್ಮನಹಳ್ಳಿ), ಗೌರಸಮುದ್ರಮಾರಮ್ಮ(ಐನಹಳ್ಳಿ), ಕೊಲ್ಲಾರಮ್ಮ ದೇವಾಲಯ (ಹುರಡಿಹಳ್ಳಿ),ಮಾಗಣಿ ಮಾರಮ್ಮ ದೇವಾಲಯ (ಚಿಕ್ಕೇರಹಳ್ಳಿ) ಇನ್ನು ಮುಂತಾದ ಕಡೆಗಳಲ್ಲಿ ಶಾಕ್ತೇಯ ದೇವಾಲಯಗಳನ್ನು ಕಾಣಬಹುದು. ಇವುಗಳು ಸರಳ ಮಾದರಿಯಲ್ಲಿ ನಿರ್ಮಾಣವಾದ ದೇವಾಲಯಗಳಾಗಿವೆ.

**ವೀರಗಲ್ಲುಗಳು**

ನದಿ ಪರಿಸರದಲ್ಲಿ ವಿಶಿಷ್ಟವಾದ ವೀರಗಲ್ಲುಗಳು ದೊರೆತಿವೆ. ಹಿಂದಿನ ಕಾಲದಲ್ಲಿ ಸಂಪತ್ತಿನ ಉಳಿವಿಗಾಗಿ ಅನ್ಯರೊಂದಿಗೆ ಹೋರಾಟ ಮಾಡುವ ಸಾಧ್ಯತೆಗಳಿದ್ದವು. ಈ ಹೋರಾಟ ಗ್ರಾಮಕ್ಕಾಗಿ ತನ್ನನ್ನು ಸರ್ಮಪಿಸಿಕೊಂಡವನ/ಳ ನೆನಪಿಗಾಗಿ ವೀರಗಲ್ಲು ಮಾಸ್ತಿಕಲ್ಲುಗಳನ್ನು ನಿರ್ಮಿಸುತ್ತಿದ್ದರು. ಇಲ್ಲಿ ಕೆಲವು ವಿಶಿಷ್ಟ ಬಗೆಯ ವೀರಗಲ್ಲುಗಳಿವೆ. ಕುಮತಿ ಬಳಿ ತುರುಕಾಳಗದ ನಡೆದ ವೀರಗಲ್ಲು ಇದೆ. ಈ ವೀರಗಲ್ಲಿನಲ್ಲಿ ಪಶುಗಳ ಕೆಳಗೆ ಮೂರು ಜನ ವೀರರಿಗೆ ಬಿಲ್ಲಿನಿಂದ ಬಾಣ ಪ್ರಯೋಗ ಮಾಡುತ್ತಾರೆ. ಬಾಣವು ಕುದುರೆ ತಲೆಗೆ ನಾಟುತ್ತದೆ. ಎಡಭಾಗದಲ್ಲಿ ನಾಲ್ಕು ಜನರು ವಿರೋಧಿ ಪಡೆಯ ಮೂರು ಜನರೊಂದಿಗೆ ಹೋರಾಡುವಾಗ ವ್ಯಕ್ತಿ ಮತ್ತು ನಾಯಿ ಮರಣ ಹೊಂದಿರುತ್ತವೆ. ಮೇಲ್ಭಾಗದಲ್ಲಿ ಸೂರ್ಯ ಚಂದ್ರ ಕೆಳಭಾಗದ ನಾಲ್ಕನೇ ಪಟ್ಟಿಕೆಯಲ್ಲಿ ಮೊದಲಿಗೆ ಗೂಳಿ ಅದರ ಹಿಂದೆ ಹಿಂಡು ಹಿಂಡು ಆಕಳುಗಳ ಸಾಲಿದೆ. ಒಂದರ ಹಿಂದೆ ತುರುಮಂದೆ ಅಥವಾ ಹುಲ್ಲುಗಾವಲಿನಲ್ಲಿ ಕಳ್ಳರಿಂದ ಬಿಡಿಸಿಕೊಂಡು ಬರುವಂತೆ ಭಾಸವಾಗುತ್ತದೆ.[೧೮] ಪ್ರಸ್ತುತ ಕ್ಷೇತ್ರ

ಅಧ್ಯಯನದಲ್ಲಿ ಕಂಡಬಂದ ವೀರಗಲ್ಲುಗಳು ಈ ಕೆಳಗಿನಂತೆ ಇವೆ.

| | | | |
|---|---|---|---|
| ಗೊಡಬನಹಾಳ್ | ೧ | ಹಾನಗಲ್ | ೫ |
| ಕ್ಯಾಸಾಪುರ | ೧ | ನುಂಕಮಲೆ | ೨ |
| ಗಂಜಿಗಟ್ಟೆ | ೩ | ಹಿರೇಕೆರೆಹಳ್ಳಿ | ೩ |
| ತಮಟಕಲ್ಲು | ೧ | ಭೈರಾಪುರ | ೩ |
| ಕಲ್ಲೇದೇವರಪುರ | ೪ | ಭಟ್ರಹಳ್ಳಿ | ೧ |
| ಮುಷ್ಟೂರು | ೩ | ಅಮಕುಂದಿ | ೧ |
| ತಿಪ್ಪೇಹಳ್ಳಿ | ೨ | ನಾಗಸಮುದ್ರ | ೩ |
| ಕುಮತಿ | ೧ | ಅಶೋಕಸಿದ್ದಾಪುರ | ೪ |
| ರಾಯಾಪುರ | ೩ | ಬ್ರಹ್ಮಗಿರಿ | ೧೦ |
| ಹುರಡಿಹಳ್ಳಿ | ೨ | ಜಟಂಗಿರಾಮೇಶ್ವರ | ೧ |
| ದೇವಸಮುದ್ರ | ೪ | ಮಾಚೇನಹಳ್ಳಿ | ೩ |

ಈ ಮೇಲಿನ ವೀರಗಲ್ಲುಗಳನ್ನು ಗಮನಿಸಿದಾಗ ತುರುಗಳನ್ನು ಕಳ್ಳತನ ಮಾಡಿಕೊಂಡು ಹೋದವರನ್ನು ಹಿಂಬಾಲಿಸಿ ಅವರೊಂದಿಗೆ ಯುದ್ದ ಮಾಡಿವಾಗ ವೀರ ಸಾಹಸ ಪ್ರದರ್ಶಿಸುತ್ತಾನೆ. ಆತನ ಸ್ಮರಣೆಗಾಗಿ ವೀರಗಲ್ಲನ್ನು ನೆಟ್ಟಿರುವರು. ಬುಡಕಟ್ಟು ಜನರೇ ವ್ಯಾಪಕವಾಗಿ ನೆಲಸಿರುವ ಈ ಪರಿಸರದಲ್ಲಿ ಬೇಟೆ, ಪಶುಪಾಲನೆ, ಕೃಷಿ ವ್ಯವಸ್ಥೆಯೂ ಪ್ರಚಲಿತದಲ್ಲಿತ್ತು. ಬುಡಕಟ್ಟು ಪಶುಪಾಲಕ ವೀರರು ದನಗಳ ರಕ್ಷಣೆಗಾಗಿ ಹೋರಾಡಿ ವೀರನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುವುದನ್ನು ಬಿಡಿಸಲಾಗಿದೆ. ಖಡ್ಗ, ಭರ್ಜಿ, ಬಾಣ ಹಾಗೂ ವೀರ ಸ್ವರ್ಗಕ್ಕೆ ಹೋಗುವುದನ್ನು ಕಂಬಗಳಲ್ಲಿ ಬಿಡಿಸಲಾಗಿದೆ. ಸ್ತ್ರಿಯರೂ ಸಹ ಸಹಗಮನ ಮಾಡಿದ ಬಗ್ಗೆ ನೆನಪಿಗಾಗಿ ಮಹಾಸತಿ ಕಲ್ಲುಗಳನ್ನು ಕೆತ್ತಲಾಗಿದೆ. ಉದಾಹರಣೆಗೆ ಗಂಜಿಗಟ್ಟೆಯಲ್ಲಿ ಕೆಂಚವ್ವ ಕಾಮವ್ವ ಗಾದ್ರಪಾಲನಾಯಕ ಸತ್ತನಂತರ ಸಹಗಮನ ಮಾಡಿದ್ದಕ್ಕಾಗಿ ಮಾಸ್ತಿಕಲ್ಲುಗಳೇ ಸಾಕ್ಷಿಯಾಗಿವೆ. ಕೆಲವೊಂದು ವೀರಗಲ್ಲುಗಳು ದಾನದತ್ತಿ, ಗುರುಹಿರಿಯರಿಗೆ ಭಕ್ತಿ, ಗೌರವ ಮುಂತಾದ ಅಂಶಗಳನ್ನು ತಿಳಿಸುತ್ತವೆ.

**ಕೋಟೆಗಳು**

ಹತ್ತನೆ ಶತಮಾನದಲ್ಲಿ ಕದಂಬರ ಕಾಲಾವಧಿಯಲ್ಲಿ ನಿರ್ಮಿಸಿದ ನುಂಕೆಮಲೆಕೋಟೆ, ಬುರುಜುಗಳು ಮೊಳಕಾಲ್ಮೂರು ಉತ್ತರ ದಿಕ್ಕಿನಲ್ಲಿವೆ. ಬ್ರಹ್ಮಗಿರಿಯ ಮೇಲಿರುವ ಕೋಟೆಯನ್ನು ಹನೆಯಕೋಟೆಯೆಂದು ಕರೆಯಲಾಗುತ್ತದೆ. ನಿಡುಗಲ್ಲು ರಾಜಧಾನಿಯಿಂದ ಕ್ರಿ.ಶ. ೧೩ನೇ

ಶತಮಾನದ ಅಂತ್ಯದವರೆಗೂ ಆಳ್ವಿಕೆ ನಡೆಸಿದ ಚೋಳ ಮಹಾರಾಜರಿಗೆ ಹನೆಯಕೋಟೆಯು ಉಪರಾಜಧಾನಿಯಾಗಿತ್ತು. ಈ ನಿಡುಗಲ್ಲು ಚೋಳ ಮಹಾರಾಜರಲ್ಲಿ ಹೆಸರುವಾಸಿಯಾದ ಬೊಮ್ಮಭೂಪಾಲನು ತನ್ನ ರಾಜ್ಯ ವಿಸ್ತರಣಾಕಾರ್ಯದಲ್ಲಿ ನಿರತನಾಗಿದ್ದನು. ಇವನಿಗೆ ಸುತ್ತ-ಮುತ್ತಲಿನ ರಾಜ್ಯಗಳ ಶತ್ರುಗಳು ಕಿರುಕುಳ ಕೊಡುತ್ತಿದ್ದರು. ಆದ್ದರಿಂದ ಇವನು ತನ್ನ ದಂಡನಾಯಕನಾದ ಬೈಚಪ್ಪನಿಗೆ "ಶತ್ರುಗಳಿಗೆ ಅಭೇದ್ಯವಾದ ಕೋಟೆಯನ್ನು ನಿರ್ಮಿಸು" ಎಂದು ಅದೇಶಿಸಿದನು.[೧೧] ಬೈಚಪ್ಪನು ತನ್ನ ಒಡೆಯನ ಅದೇಶದ ಮೇರೆಗೆ ಉಪರಾಜಧಾನಿಯಾದ ಹನೆಯದಲ್ಲಿ ಕ್ರಿ.ಶ. ೧೨೭೮ರಲ್ಲಿ ಕೋಟೆಯನ್ನು ನಿರ್ಮಿಸಿದನು. ಇದರ ಜೊತೆಗೆ ರಾಜಧಾನಿಯಾದ ನಿಡುಗಲ್ಲಿನವರೆಗೂ ಅಲ್ಲಲ್ಲಿ ಸಾಲುಕೋಟೆಗಳನ್ನು ನಿರ್ಮಿಸಿದನು. ಈ ಕೋಟೆಯು ಸಾಲಿನ ಆಡಂಬರಗಳನ್ನು ಕೇಳಿ ಶತ್ರುಗಳಾದ ಪಲ್ಲವರು, ಆಂಧ್ರರು, ಕರ್ಣಾಟರು, ಅಂಗ,ವಂಗ, ಮಾಳ್ವ, ಯಾಧವ ಮೊದಲಾದ ರಾಜರುಗಳು ಭೀತಿಗೊಂಡರು. ೧೨೬೨ ತ್ರಿಪುರಾಂತರರಲ್ಲಿ ಆಳ್ವಿಕೆ ಮಾಡಿದ ಉಲ್ಲೇಖಗಳಿವೆ. ಹನೆಯಕೋಟೆ ೧೨೭೮ ರಲ್ಲಿ ನಿರ್ಮಾಣವಾಗಿದೆ. ಕೋಟೆಯಲ್ಲಿ ವಿಷ್ಣು, ಗಣಪತಿ, ನಿಡುಗಲ್ಲು ಚೋಳ ಶಾಸನ ಅಲ್ಲದೆ ಈ ಕೋಟೆಯೊಳಗೆ ಯುದ್ದಕ್ಕೆ ಹೊರಟ ಶಸ್ತ್ರಧಾರಿ ಸೈನಿಕರ ಸಾಲು ಚಿತ್ರಗಳಿವೆ.

ಮೊಳಕಾಲ್ಮೂರು ಉತ್ತರ ಬೆಟ್ಟದ ಮೇಲೆ ಕಸ್ತೂರಿಮಲ್ಲಪ್ಪನಾಯಕ ನಿರ್ಮಿಸಿದ ಕೋಟೆಯಿದೆ. ಊರಿನಿಂದ ಉತ್ತರಾಭಿಮುಖವಾಗಿ ಮುಂದೆ ಹೋದರೆ ನೆಲ ಮಟ್ಟದಲ್ಲಿರುವ ಕೋಟೆಯ ಪ್ರಧಾನ ದ್ವಾರವಿದೆ. ಇನ್ನು ಬೆಟ್ಟವನ್ನು ಹತ್ತಿದಾಗ ಕೋಟೆಗೋಡೆಯ ಎದುರಾಗುತ್ತದೆ. ಈ ಕೋಟೆಯನ್ನು ಪೂರ್ವ ಪಶ್ಚಿಮಕ್ಕಿರುವ ಎರಡು ಬೆಟ್ಟಗಳ ಮಧ್ಯೆದಲ್ಲಿ ಕಟ್ಟಲಾಗಿದ್ದು, ಕೋಟೆಯ ಪಶ್ಚಿಮಕ್ಕಿರುವ ಬೆಟ್ಟವನ್ನು ಸಂದಿಸುವಲ್ಲಿ ಪಶ್ಚಿಮಾಭಿಮುಖವಾಗಿರುವ ದ್ವಾರವಿದೆ. ಈ ದ್ವಾರದ ಎದುರಿಗೆ ಮುಂದೆ ಚಾಚಿದ ಚೌಕಕಾರದ ಕೋತ್ತಲವಿದ್ದು ಅದರ ಕೈಪಿಡಿ ಗೋಡೆಯಲ್ಲಿ ಬಂದೂಕಿನ ರಂಧ್ರಗಳಿವೆ. ಕೋಟೆಯೊಳಗೆ ಬುರುಜು, ಕಾವಲುಗೋಪುರ, ಕೆರೆ, ಕಂದಕ ವಿಶೇಷವಾಗಿ ಗಿರಿದುರ್ಗವಾಗಿದೆ. ರಂಗಯ್ಯನದುರ್ಗ ಬೆಟ್ಟದ ಮೇಲೆ ಎರಡು ಸುತ್ತಿನ ಕೋಟೆ ಬುರುಜು ಅವಶೇಷಗಳಿದ್ದು ಇಲ್ಲಿ ದರ್ಪಿಷ್ಠ ರಾಜರುಗಳು ಆಳ್ವಿಕೆ ನಡೆಸುತ್ತಿದ್ದರು ಎಂದು ಸ್ಥಳೀಯರು ಹೇಳುತ್ತಾರೆ. ಸಿದ್ದಯ್ಯನಕೋಟೆ, ಕುಮತಿ, ವಲಸೆ, ಭಟ್ಟರಹಳ್ಳಿ, ಚಿಕ್ಕೇರಹಳ್ಳಿ, ದೇವಸಮುದ್ರ ಮುಂತಾದ ಕಡೆಗಳಲ್ಲಿ ಕೋಟೆ ಬುರುಜು ಅವಶೇಷಗಳಿವೆ. ಉಗ್ಗಿನಿಂಗಯ್ಯನಹಟ್ಟಿ(ಐನಹಳ್ಳಿ) ಅಮಕುಂದಿ, ಯರಪೋತಜೋಗಿಹಳ್ಳಿ, ಯರ್ಜೇನಹಳ್ಳಿ, ಹರಿವಿನದೊಡ್ಡ, ತುಪ್ಪದಕ್ಕನಹಳ್ಳಿಗಳಲ್ಲಿ ಕೋಟೆಗೋಡೆ ಬುರುಜು ಅಲ್ಲದೆ ಸುತ್ತಲೂ ಕಂದಕಗಳಿವೆ.

ಈ ಪರಿಸರದಲ್ಲಿ ಈಗಲೂ ಜನವಸತಿಯಿರುವ ಹಾಗೂ ಈಗಾಗಲೇ ಹಾಳುಬಿದ್ದಿರುವ ಗ್ರಾಮಗಳಲ್ಲಿ ಗ್ರಾನೈಟ್ ಶಿಲೆಗಳು ಇಲ್ಲವೆ ಮಣ್ಣಿನಿಂದ ನಿರ್ಮಿಸಿದ ಬುರುಜು ಅಥವಾ

ಕಾವಲುಗೋಪುರಗಳು ಹೆಚ್ಚಾಗಿವೆ. ಆಗಿನ ಕಾಲದಲ್ಲಿ ಪ್ರತಿಯೊಂದು ಗ್ರಾಮವನ್ನು ಶತೃಗಳಿಂದ ರಕ್ಷಿಸುವುದು ಅತ್ಯಾವಶ್ಯಕವಾಗಿದ್ದಿತು. ಆದ್ದರಿಂದ ಪ್ರತಿಯೊಂದು ಗ್ರಾಮವು ಒಂದೊಂದು ಬುರುಜನ್ನು ಹೊಂದಿರುತ್ತಿತ್ತು. ಇವುಗಳ ಮೇಲೆ ಕಾವಲುಗಾರರು ನಿಂತು ಶತೃಗಳು ಬರುವಿಕೆಯನ್ನು ಗಮನಿಸುತ್ತಿದ್ದರು. ಬಹುತೇಕ ಗ್ರಾಮಗಳಲ್ಲಿ ಕಂಡುಬರುವ ಬುರುಜುಗಳನ್ನು ಆಯಾ ಗ್ರಾಮದ ಮುಖಂಡರು ನಿರ್ಮಿಸುತ್ತಿದ್ದರು. ನುಂಕೆಮಲೆ, ಹನೆಯಕೋಟೆ ಹಾಗೂ ಮೊಳಕಾಲ್ಮೂರು ಕೋಟೆಗಳನ್ನು ಬಿಟ್ಟರೆ ಉಳಿದವುಗಳನ್ನು ಇಂಥವರೇ ನಿರ್ಮಿಸಿದರೆಂದು ನಿರ್ದಿಷ್ಟವಾಗಿ ಹೇಳಲು ಈವರೆಗೂ ದಾಖಲೆಗಳು ಲಭ್ಯವಾಗಿಲ್ಲ.

ಈ ಪ್ರದೇಶವು ಬೆಟ್ಟ ಗುಡ್ಡಗಳಿಂದ ಆವೃತವಾಗಿರವುದರಿಂದ ತಮ್ಮನ್ನು ಗ್ರಾಮ ಹಾಗೂ ಪಾಳೆಪಟ್ಟುಗಳನ್ನು ಶತ್ರುಗಳಿಂದ ರಕ್ಷಿಸಿಕೊಳ್ಳಲು ಗಿರಿದುರ್ಗಗಳನ್ನು ಹೆಚ್ಚಾಗಿ ನಿರ್ಮಿಸಿಕೊಂಡಿರುವುದು ಕಂಡುಬರುತ್ತದೆ. ಏಕೆಂದರೆ ಗಿರಿದುರ್ಗಗಳನ್ನು ವಿರೋಧಿಗಳು ಬಹುಬೇಗ ಭೇದಿಸಲು ಸಾಧ್ಯವಾಗುತ್ತಿರಲಿಲ್ಲ.

ಒಟ್ಟಿನಲ್ಲಿ ಒಂದಾನೊಂದು ಕಾಲದಲ್ಲಿ ಐತಿಹಾಸಿಕ ಮಹತ್ವವನ್ನು ಪಡೆದುಕೊಂಡಿದ್ದ ಕೋಟೆ ಕೊತ್ತಲಗಳು ಇಂದು ಆಧುನಿಕ ಯುದ್ಧೋಪಕರಣಗಳಿಂದ ಅವುಗಳ ಮಹತ್ವ ಇಲ್ಲದಂತಾಗಿದೆ.

**ಶಾಸನಗಳು**

ಯಾವುದೇ ಕಾಲದ ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಸಂಗತಿಗಳನ್ನು ತಿಳಿದುಕೊಳ್ಳಲು ಶಾಸನಗಳು ಪ್ರಮುಖ ಪಾತ್ರ ವಹಿಸುತ್ತವೆ. "ಅಳಿದು ಹೋದ ಚರಿತ್ರೆಯ ಕುರುಹುಗಳಾಗಿ ದೊರೆಯುವ ಶಾಸನಗಳು ಶತಮಾನಗಳಿಂದಲೂ ನಮ್ಮ ಸಾಂಸ್ಕೃತಿಕ ಜೀವಂತ ಪ್ರತೀಕಗಳಂತೆ ಕಂಡುಬರುತ್ತವೆ. ಅಂದಿನ ರಾಜರು ದಾನ, ದತ್ತಿ, ಪುತ್ರ ಜನನ, ಶಿಕ್ಷೆ, ದಂಡ, ಬಲಿ, ತೆರಿಗೆ, ವಿಜಯೋತ್ಸವ ಮುಂತಾದ ವಿಚಾರಗಳನ್ನು ಬಿತ್ತರಿಸಲು ಕಲ್ಲು-ಬಂಡೆಯ ಮೇಲೆ ಶಾಸನ ಬರೆಯಿಸುತ್ತಿದ್ದರು."[೨] ಈ ಪರಿಸರದಲ್ಲಿ ನದಿಯ ಜನನದಿಂದ ಕೊನೆಯವರೆಗೆ ಸುಮಾರು ಶಾಸನಗಳು ಕಂಡುಬಂದಿವೆ.

ಸೊಂಡೆಕೊಳ ಈಶ್ವರ ದೇವಾಲಯದ ಬಳಿ ಕ್ರಿ.ಶ. ೯೭೦ರ ಕಾಲದ ಸುಮಾರು ಮೂರು ಅಡಿ ಎತ್ತರದ ನಾಲ್ಕು ಅಡಿ ಅಗಲದ ಶಿಲಾಶಾಸನವಿದೆ. ಹಾಗೂ ಈ ಊರಿಗೆ ಸಂಬಂಧಿಸಿದಂತೆ ತಾಮ್ರ ಶಾಸನಗಳು ದೊರೆತಿವೆ. ಗೊಡಬನಹಾಳ್ ಶಾಸನದಲ್ಲಿ ಭರತಖಂಡವೆಂದು ಉಲ್ಲೇಖಿಸಿದೆ. ತಮಟಕಲ್ಲು ಶಾಸನವೂ ನರಸಿಂಹ ದೇವಸ್ಥಾನಕ್ಕೆ ಮಳೆಯ ನಾಯಕನ ಮಗ ಬೂಸಿನಾಯಕನು ಹಾದಿ ಮಾಡಿಸಿದ ಎಂದು ತಿಳಿದುಬರುತ್ತದೆ. ಕಲ್ಲೇದೇವರಪುರದ ಐದು ಶಾಸನಗಳು ಚಿತ್ರದುರ್ಗವನ್ನು ಬೆಮ್ಮತ್ತುಕಲ್ಲು ಎಂದು ಉಲ್ಲೇಖಿಸಿದೆ. ನಾಗಸಮುದ್ರಶಾಸನ (೧೦೮೭) ಬೆಂಚರಸದೇವ ಆಳ್ವಿಕೆಯ

ಉಲ್ಲೇಖಿಸಿಗುತ್ತದೆ. ನುಂಕೆಮಲೆಯಲ್ಲಿ ಮೂರು ಶಾಸನಗಳು ಸಿಕ್ಕಿವೆ. ಹುಟ್ಟು ಗುಂಡಿನಲ್ಲಿಯೇ ಶಾಸನಗಳನ್ನು ಕೆತ್ತಿದ್ದಾರೆ. ಮಲ್ಲಿಕಾರ್ಜುನ ದೇವಾಲಯದ ಹಿಂಭಾಗದ ಬಂಡೆಯಲ್ಲಿ ಕದಂಬ ದೊರೆಯ ಅಜವರ್ಮನ ಶಾಸನ ದೊರೆತಿದೆ. ಕದಂಬ ಮತ್ತು ಚಾಲುಕ್ಯ ಆಳ್ವಿಕೆಯನ್ನು ತಿಳಿಸುತ್ತದೆ. ಮೌರ್ಯರ ಪ್ರಸಿದ್ದ ದೊರೆ ಅಶೋಕ ಚಕ್ರವರ್ತಿ ಬ್ರಹ್ಮಗಿರಿ, ಜಟಿಂಗರಾಮೇಶ್ವರಗಳಲ್ಲಿ ಸುಮಾರು ೧೦ ಶಾಸನಗಳನ್ನು ಬರೆಯಿಸಿದ್ದಾನೆ. ಅವು ಬೌದ್ಧ ಧರ್ಮದ ಸಾರ, ಸಾಮ್ರಾಜ್ಯ ವಿಸ್ತಾರ, ಇಸಿಲ ಪಟ್ಟಣ ಗುರುಹಿರಿಯರಿಗೆ ಗೌರವ ಪೂರ್ವಕ ಅಂಶಗಳನ್ನು ಈ ಶಾಸನಗಳಿಂದ ತಿಳಿಯಬಹುದು. ರೊಪ್ಪದ ಬಡಕಲ್ಲುಕುಂಟೆ ಶಾಸನ ೧೨೯೦ ನಿಡಗಲ್ಲು ಚೋಳಶಾಸನ ದಾನ ದತ್ತಿಗಳ ವಿವರಗಳನ್ನು ನೀಡುತ್ತದೆ.

ಅಡಿಟಿಪ್ಪಣಿಗಳು

೧. ವಿರೂಪಾಕ್ಷಿ ಪುಜಾರಹಳ್ಳಿ : 'ಅಕ್ಕಮ್ಮನ ಆಚರಣೆ',ಪ್ರಸಾರಾಂಗ. ಕ.ವಿ.ವಿ. ಹಂಪಿ.ಪು ೧

೨. ಗಿರಿಜಾ.ಟಿ : 'ಚಿತ್ರದುರ್ಗ ಜಿಲ್ಲಾ ದರ್ಶಿನಿ', ರೇಖಾ ಪ್ರಕಾಶನ, ದಾವಣಗೆರೆ. ಪು ೧೩೩

೩. ಎಸ್.ವೈ.ಸೋಮಶೇಖರ : ದೇವಾಲಯಗಳ ಕೋಶ ಬಳ್ಳಾರಿ ಜಿಲ್ಲೆ, ಪು.ಸಂ. ೧೮೯ + ೧೯೦

೪. ಜಯಣ್ಣ. ಉಲ್ಲಾನಹಳ್ಳಿ : ಮೊಳಕಾಲ್ಮೂರು ತಾಲ್ಲುಕಿನ ಪುರಾತತ್ವೀಯ ಪರಿಸರ', ಅಪ್ರಕಟಿತ ಪಿ.ಎಚ್.ಡಿ ಪ್ರಬಂಧ, ಕ.ವಿ.ವಿ. ಹಂಪಿ. ಪು ೧೯೧

೫. ಎಸ್. ವೈ. ಸೋಮಶೇಖರ : 'ಜಟಂಗಿರಾಮೇಶ್ವರದರ್ಶನ', ಸುಮೇಧಪ್ರಕಾಶನ, ದೇವಸಮುದ್ರ. ಪು.ಸಂ.೫

೬. ಅದೇ, ಪು.ಸಂ.೧೦

೭. ವಿರೂಪಾಕ್ಷಿ ಪೂಜಾರಹಳ್ಳಿ : 'ಚಿನ್ನಹಗರಿ ಸಿರಿ', ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ. ಪೂಜಾರಹಳ್ಳಿ. ಪು.ಸಂ.೪

೮. ಜಯಣ್ಣ .ಯು : 'ಮೊಳಕಾಲ್ಮೂರು ತಾಲ್ಲೂಕಿನ ಪುರಾತತ್ವೀಯ ಪರಿಸರ.' ಅಪ್ರಕಟಿತ ಪಿ.ಎಚ್.ಡಿ. ಪ್ರಬಂಧ, ಕ.ವಿ.ವಿ. ಹಂಪಿ. ಪು.೧೯೫

೯. ಅದೇ, ಪು.೨೦೧

೧೦. ವಿರೂಪಾಕ್ಷಿ ಪೂಜಾರಹಳ್ಳಿ : ಲೇಖನ ಇತಿಹಾಸ ದರ್ಶನ ಸಂಪುಟ ಪು ೧೦೪

೧೧. ಶ್ರೀ ತಿಪ್ಪೇಸ್ವಾಮಿ : "ರಕ್ಷಣಾ ವಾಸ್ತುಶಿಲ್ಪ ಚಿತ್ರದುರ್ಗ ಜಿಲ್ಲೆ", ಅಪ್ರಕಟಿತ ಪಿ.ಎಚ್.ಡಿ. ಪ್ರಬಂಧ; ಕ.ವಿ.ವಿ. ಹಂಪಿ. ೫೬

೧೨. ಜಯಣ್ಣ .ಯು : 'ಮೊಳಕಾಲ್ಮೂರು ತಾಲ್ಲೂಕಿನ ಪುರಾತತ್ವೀಯ ಪರಿಸರ,' ಅಪ್ರಕಟಿತ ಪಿ.ಎಚ್.ಡಿ. ಪ್ರಬಂಧ, ಕ.ವಿ.ವಿ. ಹಂಪಿ. ೨೩೮-೪೨

ಅಧ್ಯಾಯ : ಆರು

# ನದಿ ಪರಿಸರದ ಬುಡಕಟ್ಟು ಸಂಸ್ಕೃತಿ

ನಿರ್ದಿಷ್ಟವಾದ ಸಮುದಾಯವೊಂದು ತನ್ನ ಸ್ಮರಣೆ ಮತ್ತು ನಡವಳಿಕೆಗಳ ಮೂಲಕ ಜೀವಂತವಾಗಿಸಿಕೊಂಡು ಬಂದ ಬದುಕಿನ ವಿಧಾನಕ್ಕೆ ಸಂಬಂಧಿಸಿದ ಎಲ್ಲಾ ಚಟುವಟಿಕೆಗಳನ್ನು ಮತ್ತು ಅದರಿಂದ ಬಳಕೆಗೊಳ್ಳುವ ವಸ್ತು ವಿಶೇಷಗಳನ್ನು ಒಳಗೊಂಡಂತೆ ಸಮಗ್ರವನ್ನು ಆ ಸಮುದಾಯದ ಸಂಸ್ಕೃತಿ ಎಂದು ಕರೆಯಲಾಗುತ್ತದೆ. ಇದು ಪ್ರಜ್ಞಾಪೂರ್ವಕವಾಗಿ ಉಳಿಸಿಕೊಂಡು ಬಂದದ್ದಾಗಿರುತ್ತದೆ. " ನಾಡಿನ ಪ್ರಸಿದ್ದ ಸಂಸ್ಕೃತಿ ಚಿಂತಕರಾದ ಶಂ.ಬಾ.ಜೋಷಿಯವರು ಸಂಸ್ಕೃತಿಯು ಅಂತರಂಗದ ಭಾವಬುದ್ದಿ ಸಂಬಂಧಿಸಿದೆ."[೧] ಇದೇ ಮೇರಗೆ ಈ ಸುಸಂಸ್ಕೃತ ಭಾವಬುದ್ದಿಯಿಂದ ನಿರ್ಮಿತ ವಸ್ತು ವಿಷಯಗಳಿಗೂ ಸಂಬಂಧಿಸಿವೆ ಎಂದು ಹೇಳುತ್ತಾರೆ. ಅಂದರೆ ಸಂಸ್ಕೃತಿ ಎಂಬುದು ಅಂತರಂಗ ಅಲೋಚನೆ ಮತ್ತು ಬಹಿರಂಗದ ಅಡವಳಿಕೆ ಈ ಎರಡನ್ನು ಒಳ್ಳಗೊಳ್ಳುತ್ತದೆ. ಎಂಬುದು ಇಲ್ಲಿ ವಿಧಿತವಾಗುತ್ತದೆ. ಇಲ್ಲಿ ಸುಸಂಸ್ಕೃತ ಎಂಬ ಪದವೇ ಹಲವು ಚರ್ಚೆಗಳಿಗೆ ಆಸ್ಪದ ಮಾಡಿಕೊಡುತ್ತದೆ. ಕಾರಣ ಒಬ್ಬರಿಗೆ ಸುಸಂಸ್ಕೃತ ಎನಿಸಿದ್ದು, ಮತ್ತೊಂದು ನೆಲೆಯಲ್ಲಿರುವವರಿಗೆ ಬರ್ಬರ ಕಿರಾತಕ ಎನಿಸಬಹುದಲ್ಲವೆ.? ಒಟ್ಟು ಸಮುದಾಯವೊಂದರ ಅಂತರಂಗಿಕ ಅಲೋಚನೆಗಳ ಫಲಶೃತಿಯೇ ಕಾರಣವಾಗಿ ರೂಪುಗೊಂಡ ಒಟ್ಟು ವಿಧಿ–ವಿಧಾನಗಳನ್ನು ಆ ಸಮುದಾಯದ ಸಂಸ್ಕೃತಿ ಎಂದು ಕರೆಯಬಹುದೆನಿಸುತ್ತದೆ." ಹಲವು ವಿವರಗಳಿಂದ ಕೂಡಿದ ಬದುಕನ್ನು ವ್ಯವಹಾರಿಕವಾಗಿ ನೋಡಹೊರಟಾಗ ಈ ವ್ಯಾವಹಾರಿಕತೆ ಎಂಬುದು ಇಲ್ಲಿ ಆ ಸಮುದಾಯದ ಅನ್ನದ ಅವಶ್ಯಕತೆಯು ಆಗಿರುತ್ತದೆ.ಬೇಟೆ ಮೂಲ ವಿಧಾನವಾಗಿದ್ದು, ಅಲ್ಲಿಂದ ನಂತರದಲ್ಲಿ ಬೇರೆ ಬೇರೆ ವಿಧಾನಗಳನ್ನು ರೂಢಿಸಿಕೊಂಡು ಬಂದಿರುವಾಗ ಈ ವಿಧಾನವೂ ಸಂಸ್ಕೃತಿಯ ಒಂದು ಭಾಗವಾಗಿರುತ್ತದೆ. ಇದೇ ಸಂಸ್ಕೃತಿಯು ಬೇಟೆಯ ಸಂಸ್ಕೃತಿ,ಪಶುಪಾಲಕ ಸಂಸ್ಕೃತಿ,ಕೃಷಿ ಸಂಸ್ಕೃತಿ,ಎಂದು ಕರೆಯಲ್ಪಡುತ್ತದೆ. ಪ್ರಧಾನವಾಗಿ ಅಂದರೆ ವೃತ್ತಿಯ ಮೂಲಕ ಸಂಬಂಧಿಸಿದ ಸಮುದಾಯದ ಸಂಸ್ಕೃತಿಯನ್ನು ಗುರುತಿಸುವ ಒಂದು ವಿಧಾನವಿದು. 'ಎ ಸ್ಟಡಿ ಆಫ್ ಅರ್‌ಕ್ಯಾಲಜಿ 'ಎಂಬ ಕೃತಿಯಲ್ಲಿ "ಸಮಾಜದಲ್ಲಿ ಒಬ್ಬ ಸದಸ್ಯನಾಗಿ ಮನುಷ್ಯ ಗಳಿಸಿಕೊಂಡ ಜ್ಞಾನ,ನಂಬಿಕೆ,ಕಲೆ,ನೀತಿ,ನಿಯಮ,ಆಚರಣೆ,ಸ್ವಭಾವ ಮತ್ತು ಯಾವುದೇ ಶಕ್ತ ಸ್ಥಿತಿಯನ್ನು ಒಳ್ಳಗೊಳ್ಳುವ ಒಂದು ಸಂಕೀರ್ಣವೇ ಸಂಸ್ಕೃತಿ ಎಂದು ಟೈಲರ್ ಸಂಸ್ಕೃತಿಯ ಅರ್ಥವನ್ನು ವ್ಯಾಖ್ಯಾನಿಸುತ್ತಾರೆ."[೨] ಈ ಮೂಲಕವಾಗಿಯೂ ಇದು ಒಂದು ಸಾಮೂಹಿಕ ಪ್ರಕ್ರಿಯೆಯಾಗಿರುತ್ತದೆ ಮತ್ತು ಅಂತರಂಗದ ಆಲೋಚನೆ ಮತ್ತು ಬಹಿರ್ಮುಖ ನಡವಳಿಕೆ ಎರಡಕ್ಕೂ ತಮ್ಮದೆ ಆದ ಸಂಸ್ಕೃತಿಯನ್ನು

ರೂಪಿಸಿಕೊಂಡು ಅದಕ್ಕನುಗುಣವಾಗಿ ಬದುಕುತ್ತಿರುವವರು ತಮ್ಮ ಸಾಂಸ್ಕೃತಿಕ ವಿಶಿಷ್ಟತೆಯೇ ಕಾರಣವಾಗಿ ಬೇರೆಯ ಸಮುದಾಯದಿಂದ ಭಿನ್ನತೆಯನ್ನು ಹೊಂದಿರುವವರು. ಕಾಡುಗೊಲ್ಲರು,ಕುಂಚಿಟಗರೊಂದಿಗೆ ಇವರನ್ನು ಹೋಲಿಸಬಹುದಾದರೂ ಇವರು ತಮ್ಮದೆ ಆದ ಸ್ವತಂತ್ರ ಅಸ್ತಿತ್ವವನ್ನು ಹೊಂದಿರುವವರು. ಇದೊಂದು ವಿಶಿಷ್ಟವಾದ ಬುಡಕಟ್ಟು ಏಕೆಂದರೆ ಪಶುಪಾಲಕತನ ಆರ್ಯರಿಂದ ಭಾರತಕ್ಕೆ ಕಾಲಿಟ್ಟಿತ್ತು ಎಂಬ ಒಂದು ಅಭಿಪ್ರಾಯ ನಮ್ಮಲ್ಲಿದೆ.ಆದರೆ ಸಂಸ್ಕೃತಿ ಮತ್ತು ಇತಿಹಾಸ ಚಿಂತಕರು ಆರ್ಯರು ತಮ್ಮ ಪಶು ಸಂಪತ್ತಿನೊಂದಿಗೆ ಭಾರತಕ್ಕೆ ಬಂದರು ನಿಜ.ಆದರೆ ಬರುವ ವೇಳೆಗಾಗಲೆ ಇಲ್ಲಿಯ ಮೂಲನಿವಾಸಿಗಳಲ್ಲಿ ಪಶುಪಾಲಕ ಸಮುದಾಯಗಳಿದ್ದವು ಎಂದು ಅಭಿಪ್ರಾಯಪಡುತ್ತಾರೆ. ಈ ಭಾರತೀಯ ಮೂಲದ ಪಶುಪಾಲಕತನವನ್ನು ಇಂದಿಗೂ ಉಳಿಸಿಕೊಂಡು ಬಂದಿರುವ ಒಂದು ಸಮುದಾಯ ಮ್ಯಾಸಬೇಡರದು ಎಂದು ಖಚಿತವಾಗಿ ಹೇಳಬಹುದು. ಹೀಗಾಗಿಯೇ ಇದೊಂದು ಅನನ್ಯವಾದ ಸಂಸ್ಕೃತಿ ಎಂದು ಹೇಳಲು ಸಾಧ್ಯವಾಗುತ್ತದೆ. ಕಾಡುಗೊಲ್ಲರು ಮತ್ತು ಮ್ಯಾಸಬೇಡರು ಒಂದೇ ಮೂಲದಿಂದ ಬಂದವರು ಎಂಬ ಅಭಿಪ್ರಾಯವಿದೆಯಾದರೂ ಈ ಮ್ಯಾಸ ಬೇಡರಲ್ಲಿರುವಷ್ಟು ವ್ಯಾಪಕವಾಗಿ ಪಶುಪಾಲಕತನ ಮತ್ತು ಅದಕ್ಕೆ ಸಂಬಂಧಿಸಿದ ಆಚರಣೆಗಳು ಅವರಲ್ಲಿ ಇಲ್ಲ ಎಂದೇ ಹೇಳಬಹುದು. ಇಡೀ ಭಾರತದಲ್ಲಿಯೇ ಪಶುಪಾಲಕ ಮೂಲದ ತಮ್ಮ ಸಂಸ್ಕೃತಿಯನ್ನು ತುಂಬಾ ಜತನದಿಂದ ಆಚರಣೆಯ ರೂಪದಲ್ಲಿಯಾದರೂ ಉಳಿಸಿಕೊಂಡು ಬರುತ್ತಿರುವ ಮತ್ತು ಇದಕ್ಕೂ ಪೂರ್ವದ ತಮ್ಮ ಬೇಟೆಗಾರಿಕೆಯನ್ನು ಒಂದು ವಾರ್ಷಿಕ ಕ್ರೀಯಾಚರಣೆಯ ಸ್ವರೂಪದಲ್ಲಿ ಉಳಿಸಿಕೊಂಡು ಬಂದಿರುವುದರಲ್ಲಿಯೇ ನಮಗೆ ಈ ಸಮುದಾಯದ ಅನನ್ಯತೆಯ ದರ್ಶನವಾಗುತ್ತದೆ. ಬೇಟೆ ಮತ್ತು ಪಶುಪಾಲನೆಗಳು ಅವರ ಒಟ್ಟು ಬದುಕನ್ನು ಹೇಗೆ ರೂಪಿಸಿವೆ. ಆಚರಣೆ ನಂಬಿಕೆಗಳ ಮೇಲೆ ಹೇಗೆ ಪ್ರಭಾವ ಬೀರಿವೆ ಎಂಬುದನ್ನು ಸಂಬಂಧಿಸಿದ ವಿವರಗಳ ಮೂಲಕ ಕಂಡುಕೊಳ್ಳಲು ಸಾಧ್ಯವಾಗುತ್ತದೆ.

## ವಸತಿ ವ್ಯವಸ್ಥೆ

ಪಶುಪಾಲಕರಾದ ಇವರು ನಾಡಿಗೆ ಹತ್ತಿರವಾಗಿರುವ ವಿರಳ ಕಾಡುಗಳಲ್ಲಿ ನದಿ ಬಯಲುಗಳಲ್ಲಿ ತಮ್ಮ ಪಶು ಸಂಪತ್ತಿನೊಂದಿಗೆ ವಾಸ ಮಾಡುತ್ತಿದ್ದರು. ತಮ್ಮ ಪಶುಪಾಲಕತನ ಕಾರಣವಾಗಿ ಒಂದೆಡೆಯಿಂದ ಮತ್ತೊಂದೆಡೆಗೆ ಹುಲ್ಲು ನೀರನ್ನು ಅರಸುತ್ತ ಅಲೆದಾಡುತ್ತಿದ್ದರು. ಒಂದಡೆ ಸ್ಥಿರವಾಗಿ ನೆಲೆನಿಂತರಲ್ಲ ಇವರು ಹಾಗಾಗಿ ನಿರ್ದಿಷ್ಟ ಪ್ರದೇಶದಲ್ಲಿ ಶಾಶ್ವತವಾದಂತಹ ಮನೆಗಳನ್ನು ಇವರು ಕಟ್ಟಿಕೊಳ್ಳುತ್ತಿರಲಿಲ್ಲ. ಹುಲ್ಲು, ಸೊಪ್ಪು, ಕಟ್ಟಿಗೆ ಬಳಸಿ ಮಾಡಿದ ಹಗುರವಾದ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಇಂತಹ ಗುಡಿಸಲು ಸುತ್ತಮುತ್ತ ಅದೇ ಸೊಪ್ಪು ಕಟ್ಟಿಗೆ ಬಳಸಿ ಆವರಣ ಇರುತ್ತಿತ್ತು. ಇಂತಹ ಅನೇಕ ಗುಡಿಸಲುಗಳಿಗೆಲ್ಲಾ ಸೇರಿಸಿ ಒಂದು ದೊಡ್ಡ ಆವರಣ ಕಟ್ಟಿಕೊಳ್ಳುತ್ತಿದ್ದರು ಇಂತಹ ೭೭ ಹಟ್ಟಿಗಳಿದ್ದವು ಎಂದು ಹೇಳಲಾಗುತ್ತದೆ.

ಮೂಲದಲ್ಲಿ ಹಟ್ಟಿಗಳಿಗೆ ಹತ್ತಿರದಲ್ಲಿಯೇ ಎತ್ತು ಹಸುಗಳಿಂದ ಕೂಡಿದ್ದ ಗೂಡುಗಳಿದ್ದವು. ಗೂಡು ಎಂದರೆ ಸುತ್ತಲೂ ಮುಳ್ಳು ಬೇಲಿಯನ್ನು ಹಾಕಿರುವ ಒಂದು ಆವರಣ. ದನಗಳ್ಳರ ಮತ್ತು ಕ್ರೂರ ಪ್ರಾಣಿಗಳ ಹಾವಳಿಯನ್ನು ತಡೆಯಲು ಹೀಗೆ ಬಲವಾದ ಬೇಲಿಯನ್ನು ಹಾಕಿಕೊಂಡು ಇವರು ತಮ್ಮ ಪಶುಸಂಪತ್ತನ್ನು ರಕ್ಷಣೆ ಮಾಡುತ್ತಿದ್ದಿರಬಹುದು. ಈ ಗೂಡುಗಳ ಬಳಿ ಮತ್ತು ತಮ್ಮ ನೆಲೆಗಳ ಬಳಿ ಕೋಳಿ ತಿನ್ನುವವರಾಗಲಿ ಕೊನೆಗೆ ಕೋಳಿಯೂ ಕೂಡ ಬರುವಂತಿರಲಿಲ್ಲ. ಮದ್ಯಪಾನ ಮಾಡುವವರು ಪ್ರವೇಶಿಸುವಂತಿರಲಿಲ್ಲ. ಈಚಲು ಮರದಿಂದ ತಯಾರಿಸಿದ ಯಾವ ವಸ್ತುವಿಗೂ ತಮ್ಮ ಹಟ್ಟಿ ಗುಡಿಸಲು ಎತ್ತಿನ ಗೂಡಿನ ಒಳಗೆ ಪ್ರವೇಶವಿರುವುದಿಲ್ಲ, ಕಾಂಸಿ, ಬಾದೆ, ಹುಲ್ಲನ್ನು ಬಳಸಿ ಕಟ್ಟಿರುವ ಗುಡಿಸಲುಗಳು ಬಾಗಿ ಹೋಗುವಂತಹ ಚಿಕ್ಕಬಾಗಿಲು ೪.೫ ಅಡಿ ಎತ್ತರದ ಗೋಡೆಯ ಮೇಲೆ ಹುಲ್ಲಿನ ಹೊದಿಕೆಯನ್ನು ಹಾಕುವ ಗುಡಿಸಲುಗಳು ಇವೆ.

**ನಾಮಕರಣ**

ಜನಿಸಿದ ಮಗುವನ್ನು ಮೊದಲು ಕೆಲವು ದಿನ ಮೊರದಲ್ಲಿ ಮಲಗಿಸುತ್ತಾರೆ. ನಾಮಕರಣದ ದಿನ ತೊಟ್ಟಿಲನ್ನು ಪೂಜಿಸುವವಳು ಮಗುವಿನ ಸೋದರತ್ತೆ. ಬೇಯಿಸಿದ ಹುರುಳಿಯ ಒಂದೊಂದು ಹಿಡಿಯ ಕಾಳನ್ನು ಬಟ್ಟೆಯಲ್ಲಿ ಗಂಟ್ಟುಕಟ್ಟಿ ಅದನ್ನು ತೊಟ್ಟಿಲಿನಲ್ಲಿಟ್ಟು ಗಂಡು ಮಗುವಾದರೆ ಐದು ಗಂಟು, ಹೆಣ್ಣು ಮಗುವಾದರೆ ಮೂರು ಗಂಟು ಪೂಜೆ ಮಾಡುತ್ತಾಳೆ. ನಂತರ ಮಗುವನ್ನು ತೊಟ್ಟಿಲಿನಲ್ಲಿ ಮಲಗಿಸಿ ಗಂಟನ್ನು ಬಾಯಲ್ಲಿ ತಾನುಕಚ್ಚಿ ತೆಗೆದುಕೊಂಡು ಮಗುವಿನ ಹೆಸರು ಕರೆಯುತ್ತಾ ತೊಟ್ಟಿಲನ್ನು ಇಟ್ಟಿರುವ ಜಾಗದಿಂದ ಹೊರಬಾಗಿಲವರೆಗೆ ಮೂರು ಬಾರಿ ದಾಟಬೇಕು. ಆಗ ಸೇರಿದ ಮಹಿಳೆಯರು ತಮಾಷೆಗಾಗಿ ಈಕೆಗೆ ಹೊಡೆಯುತ್ತಾರೆ. ಒಂದೆರಡು ಏಟುಗಳು ಬೀಳುತ್ತವೆ. ಇಲ್ಲಿಯೂ ಸೋಬಾನೆ ಹಾಡುವುದು ಕಡ್ಡಾಯ, ಮತ್ತೊಂದು ವಿಶೇಷವೆಂದರೆ ತಾಯಿಯ ಅಣ್ಣ ಇಲ್ಲವೆ ತಮ್ಮನ ಪಾತ್ರವೂ ಇಲ್ಲಿ ಬಹಳ ಮುಖ್ಯವಾದುದು. ಇದು ಮಗುವಿಗೆ ಉಡುದಾರ ಕಟ್ಟುವುದು ಇಲ್ಲಿ ಈತನೇ ಅಂದರೆ ಸೋದರಮಾವ. ಇದು ಮಗುವನ್ನು ತಮ್ಮ ಕುಟುಂಬಕ್ಕೆ ಸೇರಿಕೊಳ್ಳುವ ಕ್ರಿಯೆ. ಈಗ ಇದು ಕೇವಲ ಒಂದು ಆಚರಣೆಯಾಗಿ ಉಳಿದಿದೆ. ಅಂದರೆ ಮಗು ಇಲ್ಲಿ ತಾಯಿಯ ಮೂಲಕ್ಕೇ ಸೇರುತ್ತದೆಯೇ ಹೊರತು ತಂದೆಯ ಪರಂಪರೆಗೆ ಅಲ್ಲ. ಹಿಂದೆ ಇದ್ದ ಮಾತೃ ಮೂಲೀಯ ವ್ಯವಸ್ಥೆಯನ್ನು ಇದು ಸಂಕೇತಿಸುತ್ತದೆ.

**ಕುಟುಂಬ ವ್ಯವಸ್ಥೆ**

ಮೂಲತಃ ಮಾತೃ ಪ್ರಧಾನವಾಗಿರುವ ಬುಡುಕಟ್ಟು ಸಂಸ್ಕೃತಿ ಕೌಟುಂಬಿಕ ಆಚರಣೆಗಳಲ್ಲಿ ಮಹಿಳೆಗೆ ವಿಶೇಷವಾದ ಸ್ಥಾನವಿದೆ. ಪಶುಪಾಲನೆಯೊಂದಿಗೆ ಕ್ರಮೇಣ ಇಲ್ಲಿ ಪಿತೃಪ್ರಧಾನ ವ್ಯವಸ್ಥೆಗೆ ಅಡಿಯಿಡಲಾರಂಭಿಸಿದ ಸೂಚನೆಗಳು ಸಿಗುತ್ತವೆ.

**ವಿವಾಹ**

ಈಗ ಈ ಸಮುದಾಯದಲ್ಲಿ ಪಿತೃಪ್ರಾದಾನ್ಯ ಇದ್ದಗ್ಯೂ ವಿವಾಹದ ಸಂದರ್ಭದಲ್ಲಿ ವರನ ಕಡೆಯವರು ಹೆಣ್ಣು ನೋಡಲು ಹೆಣ್ಣಿನ ಮನೆಗೆ ಹೋಗುತ್ತಾರೆ. ನಾಗರೀಕ ಎಂದು ಕರೆಸಿಕೊಳ್ಳುವ ವೈದಿಕಸಂಸ್ಕೃತಿಯಲ್ಲಿ ತಮ್ಮ ಮಗಳನ್ನು ವರ ಮಹಾಶಯ ಇರುವ ಮನೆಗೆ ಕರೆದುಕೊಂಡು ಹೋಗಿ ತೋರಿಸಿ ಮುಜುಗರಕೊಳ್ಳಗಾಗುವ ತಂದೆ ತಾಯಿ ಮತ್ತು ಹುಡುಗಿಯ ಮನಃಸ್ಥಿತಿಗೆ ಈ ಪದ್ಧತಿಯನ್ನು ಹೋಲಿಸಿದರೆ ಕಾಡುತನದಲ್ಲಿಯೇ ಹುದುಗಿರುವ ಹೆಣ್ಣನ್ನು ಗೌರವಿಸುವ ಶಿಷ್ಟತೆ, ಸುಸಂಸ್ಕೃತ ನಡವಳಿಕೆ ವಿಶೇಷವಾದುದಾಗಿದೆ. ಹೆಣ್ಣು ಒಪ್ಪಿಗೆಯಾದ ಮೇಲೆ ಒಳ್ಳೆಯ ಮಾತಿಗೆ ಬರುತ್ತೇವೆ' ಎಂದು ದಿನವನ್ನು ನಿಗದಿಪಡಿಸುತ್ತಾರೆ. ಇದನ್ನು ವೀಳ್ಯದ ಶಾಸ್ತ್ರ ಅಥವಾ ಎಲೆ ಅಡಿಕೆಶಾಸ್ತ್ರ ಎಂದು ಕರೆಯುತ್ತಾರೆ. ಬೇಟೆ,ಪಶುಪಾಲನೆ,ಕೃಷಿ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಈ ಜನರಿಗೆ ಸಂಜೆಯೇ ಬಿಡುವು. ಹಾಗಾಗಿ ಸಂಜೆ ಈ ಕಾರ್ಯ ಇಟ್ಟುಕೊಳ್ಳುತ್ತಾರೆ. ಹೆಣ್ಣಿನ ಮನೆಯಲ್ಲಿ ನೆರೆದಿರುತ್ತಾರೆ. ಹೆಣ್ಣಿನ ಕಡೆಯ ಹಿರಿಯರು ಬಂದವರನ್ನು ಸಾಂಪ್ರದಾಯಿಕವಾಗಿ ನೀವೆಲ್ಲ ಏಕೆ ನಮ್ಮ ಮನೆಗೆ ಬಂದಿದ್ದೀರಾ? ಎಂದು ಕೇಳಲು ಗಂಡಿನ ಕಡೆಯ ಹಿರಿಯ ನಿಮ್ಮ ಮನೆಯಲ್ಲಿ ಹಾಲು,ಅನ್ನ,ಊಟ ಮಾಡಲು ಬಂದಿದ್ದೇವೆ ಎನ್ನುತ್ತಾರೆ. ಆಗಬಹುದು ಎಂದರೆ ಮುಂದಿನ ಮಾತುಕತೆ. ಹಾಲು,ತುಪ್ಪ ಶುಭ ಅದು ಪವಿತ್ರವಾದ ಆಹಾರ. ಜೀಗತನ ಬೆಳೆಯಲು ಆ ಮೂಲಕ ಸಾಧ್ಯ ಎಂಬ ಆಶಯ ಪಶುಪಾಲಕರಾದ ಇವರಲ್ಲಿದೆ. ನಂತರ ನಡುಮನೆಯಲ್ಲಿ ಕರಿಕಂಬಳಿ ಗದ್ದುಗೆ ಹಾಕಿ ಅದರ ಮೇಲೆ ಎಲೆ,ಅಡಿಕೆ ಇಟ್ಟು ಪೂಜೆ ಮಾಡಿ ನಮಸ್ಕರಿಸಿ ಈ ಹೆಣ್ಣನ್ನು ಇಂಥವರಿಗೆ ಕೊಡಲು ನಿಮಗೆಲ್ಲಾ ಒಪ್ಪಿಗೆಯೇ ಎಂದು ನೆರೆದವರನ್ನು ಕೇಳುತ್ತಾರೆ. ಒಪ್ಪಿಗೆ ಎಂದು ಹಿರಿಯರೆಲ್ಲಾ ಹೇಳಬೇಕು. ಆಗ ಎಲ್ಲಾ ಬೆಡಗಿನ ಮುಖ್ಯಸ್ಥರನ್ನು ಕರೆದು ಎಲೆ ಅಡಿಕೆ ಕೊಡಲಾಗುತ್ತದೆ. ವೀಳ್ಯ ಮುಟ್ಟಿ ಅವರೆಲ್ಲಾ ಒಪ್ಪಿಗೆ ಕೊಡುವ ಸೂಚನೆಯಿದು. ಅಂದರೆ ಒಂದು ವಿವಾಹ ನಿಶ್ಚಯ ಎಂದರೆ ಇಡೀ ಸಮುದಾಯದ ಒಪ್ಪಿಗೆಯನ್ನು ಪಡೆದು ಆಗಬೇಕೆಂಬುದೇ ಈ ನಿಯಮ. ನಂತರ ಗದ್ದಿಗೆ ತೆಗೆದು ಮತ್ತೆ ಹಾಸಿ ಎಲೆ ಅಡಿಕೆ ಇಟ್ಟು ಹೆಣ್ಣಿನ ತಾಯಿಯನ್ನು ಕರೆದು ಮೇಲೆ ಕೂರಿಸಿ ಆಕೆಗೆ ಎಲೆ ಅಡಿಕೆ, ಕೊಬ್ಬರಿ ಬಟ್ಟಲು, ಉತ್ತುತ್ತಿಹಣ್ಣು ಒಂದು ಹಸಿರು ರವಿಕೆ ಇಟ್ಟು ಕಣವನ್ನು ಮಡಿಲು ತುಂಬಲಾಗುತ್ತದೆ. ಇದು ಕುಟುಂಬದಲ್ಲಿ ತಾಯಿಗೆ ಕೊಡುವ ಗೌರವ ಪ್ರಾಶಸ್ತ್ಯ ಆಕೆ ಒಪ್ಪಿ ಮಡಿಲು ತುಂಬುತ್ತಾರೆ.ಆಕೆ ನೆರೆದ ಹಿರಿಯರ ಪಾದಕ್ಕೆ ನಮಸ್ಕರಿಸಬೇಕು. ಅಲ್ಲಿಗೆ ನಿಶ್ಚಿತಾರ್ಥ ಮುಗಿದಂತೆ. ಇದೇ ವೇಳೆಯಲ್ಲಿ ಹೆಣ್ಣಿಗೆ ಏನೇನು ಒಡವೆ ತರಬೇಕು. ತೆರ ಎಷ್ಟು ಕೊಡಬೇಕು, ಎಷ್ಟು ಸುಖಮಂಚಿ ಅಳೆಯಬೇಕು ಎಂದು ತೀರ್ಮಾನವಾಗುತ್ತದೆ. ತೆರ ಹೆಣ್ಣಿಗೆ ಕೊಡುವ ವಧುದಕ್ಷಿಣೆ. ಮ್ಯಾಸನಾಯಕ ಸಮುದಾಯದಲ್ಲಿ ಹೆಣ್ಣಿನ ಮನೆಗೆ ಮದುವೆ ಖರ್ಚಿಗೆ ಬೇಕಾಗುವ ಭತ್ತ, ಜೋಳ ಇತರ ಧಾನ್ಯಗಳನ್ನು ಗಂಡಿನವರೇ

ತಂದು ಹಾಕಬೇಕಾಗಿತ್ತು. ಇದನ್ನೇ 'ಸುಖಮಂಚಿ' ಎಂದು ಕರೆಯುತ್ತಾರೆ. ದಕ್ಷಿಣಿಕೊಟ್ಟು ವೆಚ್ಚಕ್ಕೂ ಕೊಟ್ಟು ತಾನೇ ಹೆಣ್ಣಿನ ಮನೆಗೆ ಬಂದು ವಿವಾಹ ಮಾಡಿಕೊಂಡು ಹೋಗುವ ಪದ್ದತಿ ಹೆಣ್ಣಿಗೆ ಈ ಬುಡಕಟ್ಟಿನಲ್ಲಿ ಕೊಟ್ಟಿದ್ದ ಪ್ರಾಶಸ್ತ್ಯದ ಸಂಕೇತವಾಗಿದೆ. ಹಾಗೆಯೇ ಮದುವೆಯ ದಿನ ಮಧುಮಗಳಿಗೆ ಗಂಡಿನ ಕಡೆಯವರು ಸೀರೆ ತರುವುದಷ್ಟೇ ಅಲ್ಲದೆ ಆಕೆಯ ತಾಯಿಗೂ ಸೀರೆ ಎಂದು ತರುತ್ತಾರೆ. ಅಜ್ಜಿ ಬದುಕಿದ್ದರೆ ಆಕೆಗೂ ಅಜ್ಜಿ ಜವಳಿ ಎಂದು ತರುತ್ತಾರೆ. ಇದನ್ನು ಕರಿಕಂಬಳಿ ಗದ್ದಿಗೆಯ ಮೇಲಿಟ್ಟು ಸಮುದಾಯದ ಎಲ್ಲರ ಸಮಕ್ಷಮ ಒಪ್ಪಿಸುತ್ತಾರೆ. ತರದಿದ್ದರೆ ತಂದಿಲ್ಲ ಎಂದು ಆಕ್ಷೇಪಿಸುವ ಹಕ್ಕು ಸಮುದಾಯಕ್ಕಿದೆ. ವಿವಾಹದಲ್ಲಿ ಬಳಕೆಯಾಗುವ ಎಲೆ ಅಡಿಕೆಯೆಲ್ಲಾ ಗಂಡಿನ ಕಡೆಯವರದೆ. ಇದೇ ಅಧಿಕ ಖರ್ಚು ಗಂಡಿನ ಕಡೆಯವರಿಗೆ ಹೆಣ್ಣಿನ ಕಡೆಯವರಿಗೆಲ್ಲಾ ಇದನ್ನು ಹಂಚುತ್ತಾರೆ. ವರದಕ್ಷಿಣೆ ಪಡೆದು ಆ ಹಣದಲ್ಲಿಯೇ ತನ್ನ ಅಗತ್ಯಗಳನ್ನು ಪೂರೈಸಿಕೊಂಡು ಸಾಂಕೇತಿಕವಾಗಿ ಈ ಆಚರಣೆಗಳನ್ನು ನಡೆಸುವ ವಿಧಾನ ಈಗ ಇಲ್ಲಿಯೂ ಪ್ರಾರಂಭವಾಗಿದೆ. ಸುಸಂಸ್ಕೃತ ಹೆಣ್ಣನ್ನು ಗೌರವಿಸುವ ಪದ್ಧತಿ ಇಲ್ಲವಾಗಿ ತಾನೇ ವಿಜೃಂಬಿಸುವ ನವನಾಗರೀಕತೆಯನ್ನು ಈ ಸಮುದಾಯದ ಪುರುಷರು ಮೈಗೂಡಿಸಿಕೊಳ್ಳುತ್ತಿದ್ದಾರೆ. ಗಂಡಿನ ಕಡೆಯವರು ಹೆಣ್ಣಿಗೆ ಯಾವುದೇ ಒಡವೆ ತರದಿದ್ದರೂ ಕಡ್ಡಾಯವಾಗಿ ಬಲಗೈಗೆ ಒಂದು ಬೆಳ್ಳಿಯ ಕಡಗವನ್ನು ತರಲೇಬೇಕು. ಇದನ್ನು 'ಧಾರೆ ಕಡಗ' ಎಂದೆ ಕರೆಯುತ್ತಾರೆ. ಕಾಡಗೊಲ್ಲರಲ್ಲಿ ದಪ್ಪನೆಯ ಕಡಗ ಧರಿಸುವ ಪದ್ದತಿ ಇದೆ. ಮ್ಯಾಸನಾಯಕರ ಮಹಿಳೆ ಧರಿಸುವ ಧಾರೆಯ ಕಡಗ ಚಿಕ್ಕದು. ಮದುವೆಯ ನಿಮಿತ್ತ ಮನೆಯ ಮುಂದೆ ಚಪ್ಪರ ಹಾಕುವ ಸಂಪ್ರದಾಯ ಹಿಂದೆ ಇರಲಿಲ್ಲ. ಅಲೆಮಾರಿ ಪಶುಪಾಲಕಕರಾದ ಇವರಿಗೆ ನಿಶ್ಚಿತ ನೆಲೆಯೇ ಇಲ್ಲದಿರುವಾಗ ನೆಲಗುಡಿಸಲುಗಳೇ ವಸತಿಗಳಾಗಿರುವ ಚಪ್ಪರ ಎಲ್ಲಿ ಹಾಕಬೇಕು.? ತಮ್ಮ ವಸತಿ ವ್ಯವಸ್ಥೆಯ ರೂಪವೇ ಕಾರಣವಾಗಿ ಅವರಲ್ಲಿ ಈ ಚಪ್ಪರ ಹಾಕದಿರುವ ಪದ್ದತಿ ಬಂದಿರಬಹುದು. ಅಕ್ಷತೆ, ಅರಿಶಿಣ ಯಾವುದು ಇಲ್ಲ. ಸ್ನಾನಮಾಡಿ ಗಂಡು ತನ್ನ ಮನೆ ದೇವರಗುಡಿಗೆ ಹೋಗಿ ಪೂಜೆ ಮಾಡಿಸಿ ಅಲ್ಲಿ ಪೂಜಾರಿ ಮುತ್ತಿಗಾರರ ಬೊಟ್ಟು, ತಲೆಗೆ ಪೇಟಕಟ್ಟಿ ಹೊಂಬಾಳೆ ಮುಡಿಸಿ ಕೈಗೆ ನಿಂಬೆಹಣ್ಣು ಸಿಕ್ಕಿಸಿದ ಕತ್ತಿಕೊಟ್ಟು (ಇದು ಶೌರ್ಯದ ಸಂಕೇತ) ತೀರ್ಥಕುಡಿಸಿದರೆ ಮದುಮಗನಾದಂತೆ. ಹುಡುಗಿಯೂ ಅಷ್ಟೇ ಗಂಡು ಮದುಮಗನಾಗಿ ಧಾರೆಯ ಹಿಂದಿನ ದಿನ ರಾತ್ರಿ ಮದುಮಗಳ ಊರಿಗೆ ತಲುಪಿದ ನಂತರ ಹುಡುಗಿಗೆ ಸ್ನಾನ ಮಾಡಿಸಿ ಆಕೆಯನ್ನು ಕುಲದೇವರ ಗುಡಿಗೆ ಕರೆದೊಯ್ದು ಬೊಟ್ಟು ಅಂದರೆ ಮುತ್ತಿಗಾರರ ಬೊಟ್ಟು ಇರಿಸಿ ತೀರ್ಥ ಕುಡಿಸಿದರೆ ಅಲ್ಲಿಗೆ ಆಕೆಯು ಮದುಮಗಳಾದಂತೆ ಮರುದಿನ ನಿಗದಿತ ವೇಳೆಗೆ ಸೋದರ ಮಾವ ಮದುಮಗಳನ್ನು ಹೊರಗೆ ಕರೆತಂದು ಹುಡುಗನ ಎದುರಿಗೆ ನಿಲ್ಲಿಸಲು ಮದುಮಗ ದಾರಕ್ಕೆ ಪೋಣಿಸಿದ ಕರಿಮಣಿ ಕಟ್ಟುತ್ತಾನೆ. ತಾಳಿ ಅದರಲ್ಲಿ ಇರುವುದಿಲ್ಲ. ಇದಕ್ಕೆ ಮೊದಲು ಮತ್ತೊಮ್ಮೆ ಕರಿಕಂಬಳಿ ಗದ್ದುಗೆ

ಹಾಕಿ ಎಲ್ಲರಿಗೂ ಎಲೆ,ಅಡಿಕೆ ಹಂಚಿ ತಾವು ತಂದಿದ್ದ ಸೀರೆ ಒಡವೆಯನ್ನು ಎಲ್ಲರ ಸಮಕ್ಷಮ ಹುಡುಗಿಯ ಮನೆಯವರಿಗೆ ಒಪ್ಪಿಸುತ್ತಾರೆ. ಬಹಳ ಹಿಂದೆ ವರನ ಬದಲಾಗಿ ಕತ್ತಿಯನ್ನೋ,ಕೋಲನ್ನೋ ಕಳಿಸುತ್ತಿದ್ದರಂತೆ ಇವರೊಂದಿಗೆ ಹುಡುಗಿಗೆ ಮದುವೆಶಾಸ್ತ್ರ ನಡೆಯುತ್ತಿತ್ತು ಎಂದು ಹಿರಿಯರು ಹೇಳುತ್ತಾರೆ. ಯೋಧರೂ ಆಗಿದ್ದ ಇವರು ಸೇನೆಯ ಮೀಸಲು ಪಡೆಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಕಾರಣ ನಿಗದಿತ ಹೆಣ್ಣನ್ನು ಕರೆದುಕೊಂಡು ಹೋಗಿ ಗಂಡಿನ ಮನೆ ತುಂಬಿಸಿಕೊಳ್ಳುತ್ತಿದ್ದರು. ಮುಹೂರ್ತದ ನಂತರ ಹುಡುಗಿ ಎಲ್ಲಾದರೂ ಅಡಗಿಕೊಳ್ಳುವ ನಂತರ ಗಂಡು ಹೋಗಿ ಕರೆತರುವ ಪದ್ಧತಿ ಇದ್ದು ಹಿಂದೆ ಇದ್ದ ಕನ್ಯೆಯನ್ನು ಅಪಹರಿಸಿಕೊಂಡು ಹೋಗಿ ವಿವಾಹವಾಗುತ್ತಿದ್ದ ವ್ಯವಸ್ಥೆಯ ಒಂದು ಸಾಂಕೇತಿಕ ಆಚರಣೆಯಾಗಿದೆ. ಮದುವೆಯ ಎಲ್ಲಾ ಕ್ರೀಯೆಗಳಲ್ಲಿ ಸೋಬಾನೆ ಪದಗಳಿಗಿರುವ ಪ್ರಾಶಸ್ತ್ಯ ಒಂದು ರೀತಿಯಲ್ಲಿ ಇವೇ ಶುಭ ನುಡಿಗಳು,ಇವಿಲ್ಲದೆ ಮದುವೆಯೇ ಇಲ್ಲ ಮ್ಯಾಸಬೇಡರಲ್ಲಿ.

ಆದರೆ ಇಂದು ಅನ್ಯ ಧರ್ಮಗಳ ಶಿಸ್ತುಗಳಿಗೆ ತಮ್ಮನ್ನು ಒಪ್ಪಿಸಿಕೊಳ್ಳುವ ತವಕದಲ್ಲಿ ತನ್ನ ಮೂಲ ಸಂಸ್ಕೃತಿಯನ್ನು ಮರೆತು ಪುರೋಹಿತರು ಹೇಳುವ ಮಂತ್ರಗಳನ್ನು ಉಚ್ಚರಿಸುತ್ತಾ ಮಂಟಪಗಳಲ್ಲಿ ಮದುವೆಯಾಗುವ ವಿಧಾನಗಳೇ ಸಾಮಾನ್ಯವಾಗುತ್ತಿವೆ.

ಗಂಡಿನ ಕಡೆಯವರಲ್ಲಿಯೂ ಆತನ ಸಹೋದರಿಗೆ ಪ್ರಾಶಸ್ತ್ಯ ಹೆಚ್ಚು. ಮನೆ ತುಂಬಿಸಿಕೊಳ್ಳುವಾಗ ಸಾಂಕೇತಿಕವಾಗಿ ಮನೆಯ ಮುಂದೆ ಒಂದು ಅಡಿ ಜಾಗದಲ್ಲಿ ಬಿತ್ತನೆ ಮಾಡಿ ನಂತರ ಒಳಗೆ ಪ್ರವೇಶಿಸುತ್ತಾರೆ. ಗಂಡ ಬಿತ್ತುವ ಸಲಕರಣೆಗಳನ್ನು ಹೊತ್ತು ನಿಂತಿದ್ದರೆ,ಹೆಣ್ಣು ಪಶುಪಾಲಕತನದ ಸಾಂಕೇತಿಕವಾಗಿ ಕಡಗೋಲನ್ನು ಭುಜಕ್ಕೆ ಆನಿಸಿ ಹಿಡಿದಿರುತ್ತಾಳೆ. ಇಬ್ಬರೂ ಒಟ್ಟಾಗಿ ದುಡಿದು ಉಣ್ಣಬೇಕಾದ ಸಮಾನವಾಗಿ ಜವಾಬ್ದಾರಿ ಹೊರಬೇಕಾದ ಸೂಚನೆಯಿದು. ಹಾಗೆಯೇ ಪಶುಪಾಲಕತನದೊಂದಿಗೆ ಕೃಷಿ ಸಂಸ್ಕೃತಿಯನ್ನು ಅಳವಡಿಸಿಕೊಂಡಿರುವ ವಿಧಾನಕ್ಕೂ ಸಾಂಕೇತಿಕವಿದು.

**ಆಡಳಿತ ವ್ಯವಸ್ಥೆ**

ಸಾಮಾನ್ಯವಾಗಿ ಪ್ರತಿಯೊಂದು ಬುಡಕಟ್ಟು ತನ್ನದೆ ಆದ ಆಡಳಿತ ವ್ಯವಸ್ಥೆಯನ್ನು ಹೊಂದಿರುತ್ತದೆ. ತಮಗೆ ತಾವೇ ಸ್ವಂತಿಕೆಯನ್ನು,ಸ್ವಾತಂತ್ರ್ಯವನ್ನು ಪಡೆದಿದ್ದ ನಮ್ಮ ಹಲವು ಸಮುದಾಯಗಳ ಸ್ವರೂಪವನ್ನು ಇದು ಸ್ಪಷ್ಟಪಡಿಸುತ್ತದೆ. ಒಟ್ಟು ಈ ಮ್ಯಾಸನಾಯಕರ ಸಮುದಾಯದ ಆಡಳಿತ ವ್ಯವಸ್ಥೆಯನ್ನು ಕುಟುಂಬ,ಗುಡಿಕಟ್ಟೆ,ಕಟ್ಟೇಮನೆ ಎಂದು ಮೂರು ಹಂತಗಳಲ್ಲಿ ವಿಭಾಗಿಸಲಾಗಿದೆ.

ಪುರುಷನೇ ಮನೆಯ ಮುಖ್ಯಸ್ಥನಾಗಿ ಅದರ ವಹಿವಾಟನ್ನು ನೋಡಿಕೋಳ್ಳುವ ವ್ಯವಸ್ಥೆ ಈಗ ಬಳಕೆಯಲ್ಲಿದೆ. ತನ್ನ ಮನೆಗೆ ಸಂಬಂಧಿಸಿದ ಸಮಸ್ಯೆಯನ್ನು ತಾನೇ ಪರಿಹರಿಸಿಕೊಳ್ಳುತ್ತಾನೆ.

ಸಮುದಾಯದಲ್ಲಿ ಆಡಳಿತ ಎಂದಾಕ್ಷಣ ಅಲ್ಲಿಗೆ ಸೌಲಭ್ಯಗಳನ್ನು ಒದಗಿಸುವ ವ್ಯವಸ್ಥೆಯೇನೂ ಅಷ್ಟಾಗಿ ಕಾಣುವುದಿಲ್ಲ. ಏಕೆಂದರೆ ಅಲ್ಲಿಯ ಬದುಕೇ ಬಹಳ ಸರಳವಾದುದು. ಇಲ್ಲಿ ಮುಖ್ಯವಾಗಿ ಆಡಳಿತ ಪ್ರವೇಶ ಮಾಡುವುದೇ ಇಡೀ ಸಮುದಾಯಕ್ಕೆ ಸಂಬಂಧಿಸಿದ ಬಿಕ್ಕಟ್ಟುಗಳು ಉಂಟಾದಾಗ ಅಥವಾ ಸಮುದಾಯದ ಯಾರೊಬ್ಬನಿಗಾದರೂ ಮತ್ತೊಬ್ಬನಿಂದ ಅನ್ಯಾಯವಾದಾಗ ತಮ್ಮ ಸಾಂಸ್ಕೃತಿಕ ನಾಯಕನ ಆರಾಧನೆ, ಆಚರಣೆಗಳಿಗೆ ಸಂಬಂಧಿಸಿದಂತೆ ಸಮಸ್ಯೆಗಳು ತಲೆದೋರಿದಾಗ ಚರ್ಚೆ ತೀರ್ಮಾನದ ಅವಶ್ಯಕತೆ ಉಂಟಾಗುತ್ತದೆ.

ಬಿಕ್ಕಟ್ಟುಗಳು ಉಂಟಾದಾಗ ಮೊದಲ ಹಂತದ ನ್ಯಾಯ ಪಂಚಾಯಿತಿ ನಡೆಯುವುದು ಗುಡಿಕಟ್ಟುಗಳಲ್ಲಿ, 'ಗುಡಿಕಟ್ಟು' ಎಂದರೆ ನಿರ್ದಿಷ್ಟವಾದ ಸಾಂಸ್ಕೃತಿಕ ನಾಯಕ ಕುಲದೇವರನ್ನು ಆರಾಧಿಸುವ ಹಲವು ಬೆಡಗುಗಳವರು ಸೇರಿ ತಾವು ಆ ನಾಯಕನ ಗುಡಿಕಟ್ಟಿಗೆ ಸೇರಿದವರು ಎಂದು ತಮ್ಮನ್ನು ಗುರುತಿಸಿಕೊಳ್ಳುತ್ತಾರೆ. ಉದಾಹರಣೆಗೆ ಕಂಪಳದೇವರ ಗುಡಿಕಟ್ಟಿಗೆ ಸೇರಿದವರು ಬೋಸೆದೇವರು,ದಡ್ಡಿಸೂರನಾಯಕ,ಬೊಮ್ಮದೇವರು ಗುಡಿಕಟ್ಟಿಗೆ ಸೇರಿದವರು ಇತ್ಯಾದಿ. ಈ ಗುಡಿಕಟ್ಟಿಗೆ ನಾಯಕ ಅಥವಾ ಯಜಮಾನ ಎಂದಾಕ್ಷಣ ಆತನ ಮಾತೇ ಅಂತಿಮವಲ್ಲ. ಇತರ ಹಿರಿಯರ ಮಾತಿಗೆ ಅನುಗುಣವಾಗಿ ಅಲ್ಲಿ ಸಮಸ್ಯೆಯನ್ನು ಇತ್ಯರ್ಥ ಮಾಡಬೇಕಾಗುತ್ತದೆ. ಇಲ್ಲಿ ಇತ್ಯರ್ಥವಾಗದ ಸಮಸ್ಯೆಯನ್ನು ಕಟ್ಟೆಮನೆಗಳ ಹಂತಕ್ಕೆ ತೆಗೆದುಕೊಂಡು ಹೋಗಲಾಗುತ್ತದೆ. ಒಟ್ಟು ಮ್ಯಾಸ ಮಂಡಲದಲ್ಲಿ ಮೂರು ಕಟ್ಟೆಮನೆಗಳಿವೆ. ಹೀಗೆ ಮನೆಗಳಾಗುವುದಕ್ಕೆ ಸಮುದಾಯದಲ್ಲಿ ಉಂಟಾದ ಬಿರುಕುಗಳೇಕಾರಣ. ನಾಯಕನಹಟ್ಟಿ, ಗೋನೂರು ಮತ್ತು ನನ್ನಿವಾಳ ಇವೆ ಆ ಮೂರು ಕಟ್ಟೆಮನೆಗಳು. ಪ್ರತಿಕಟ್ಟೆ ಮನೆಗೂ ಒಬ್ಬ ದೊರೆ ಇರುತ್ತಾನೆ. ನಾಯಕನಹಟ್ಟಿ ಕಟ್ಟೆಮನೆಯ ದೊರೆ ಬಸವರಾಜು,ನನ್ನಿವಾಳ ಕಟ್ಟೆಮನೆಯ ದೊರೆ ಶ್ರೀ ಸೂರಯ್ಯನವರು, ಗೋನೂರು ಕಟ್ಟೆಮನೆಯ ದೊರೆ ಶ್ರೀ ಬೋಸಯ್ಯನವರು ಈ ದೊರೆ ಪಟ್ಟ ವಂಶಪಾರಂಪರ್ಯವಾಗಿ ಬರುತ್ತದೆ. ಸಮುದಾಯದ ರೀತಿನೀತಿಗಳಿಗೆ ಅನುಗುಣವಾಗಿ ಇವನಿಗೆ ಪಟ್ಟವನ್ನು ಕಟ್ಟುತ್ತಾರೆ. ದೊರೆ ಕುಳಿತುಕೊಳ್ಳುವ ನಿರ್ಧಿಷ್ಟವಾದ ಕಟ್ಟೆ ಇದ್ದು, ಅದರ ಮೇಲೆ ಯಾರೂ ಕುಳಿತುಕೊಳ್ಳುವಂತಿಲ್ಲ. ಅದೇ ಸಿಂಹಾಸನ ಇಲ್ಲಿ ದೊರೆಯ ತೀರ್ಮಾನವೂ ಸಹ ಅಲ್ಲಿ ಸೇರಿದ ಹಿರಿಯರ ಮಾತಿಗೆ ಅನುಗುಣವಾಗಿಯೇ ಇರಬೇಕಾಗುತ್ತದೆ."[೨] ಮ್ಯಾಸಬೇಡರ ಕಟ್ಟೆಮನೆಗಳ ಸಭೆಯಲ್ಲಿ ಸೂರ್ಯನೇ ಸಾಕ್ಷಿ. ಹಿರಿಯರಾದ ದೊರೆ ನಾಯಕ ಒಂಭತ್ತು ಅಜ್ಜನವರ ಮುಂದೆ ಪ್ರತಿಭಟಿಸಿ ಮಾತನಾಡುವಂತಿಲ್ಲ. ತಪ್ಪಿ ನುಡಿಯುವವ ದೈವದಿಂದ ಪ್ರತಿಕೂಲ ಅನುಭವಿಸಬೇಕಾಗುತ್ತದೆ ಎಂಬ ಭೀತಿ ಇದೆ. ನ್ಯಾಯ ತೀರ್ಮಾನ ಮಾಡಿ ಕುಲಾಚಾರಕ್ಕೆ ಸಂಬಂಧಪಟ್ಟ ವಿಷಯವಾದರೆ ನಿಷೇಧ ಹೇರಿ ನಂತರ ನಿಯಮನುಸಾರ ಕುಲದ ಒಳಗೆ ಸೇರಿಸಿಕೊಳ್ಳುವ ಆದೇಶ ನೀಡಲಾಗುತ್ತದೆ. ಕೆಲವೂಮ್ಮೆ ಈ ಕಟ್ಟೇಮನೆಗಳಲ್ಲಿ ಇತ್ಯರ್ಥವಾಗದ ಸಂಗತಿಯನ್ನು ಕಂಪಳದೇವರ ಸನ್ನಿದಾನಕ್ಕೆ ಕೊಂಡಯ್ಯಲಾಗುತ್ತದೆ. ಪೆದ್ದೋಬಳೇಶ

ಎಂದು ಕಂಪಲಿಓಬಯ್ಯ ಎಂಬ ಹೆಸರಿನಲ್ಲೂ ಇಲ್ಲಿ ಅಹೊಬಲಂನ ನರಸಿಂಹಸ್ವಾಮಿಯನ್ನು ಪೂಜಿಸಲಾಗುತ್ತದೆ. ಮ್ಯಾಸ ಮಂಡಲದ ವೈಷ್ಣವ ಧರ್ಮದ ಕೇಂದ್ರವಿದು. ಇಲ್ಲಿಂದ ಚೆದುರಿಹೋಗಿ ತಾವಿರುವ ಎಡೆಯಲ್ಲೆಲ್ಲಾ ಓಬಳದೇವರನ್ನು ಸ್ಥಾಪಿಸಿದ್ದಾರೆ. ಹಾಗಾಗಿ ಇತ್ಯರ್ಥವಾಗದ ಸಮಸ್ಯೆಯನ್ನು ಈ ಮೂಲ ಸ್ಥಳಕ್ಕೆ ತಂದು ಚರ್ಚೆಯ ಮೂಲಕ ಮೂರು ಕಟ್ಟೆಮನೆಗಳಿಂದ ಸಿಡಿದ ಕೆಲವು ಗುಂಪುಗಳು ಅಲ್ಲಿ ಪ್ರವೇಶಿಸಿದ ರಾಜಕಾರಣ ಕಾರಣವಾಗಿ ತಮ್ಮ ತಮ್ಮ ಗುಡಿಕಟ್ಟುಗಳನ್ನೇ ತಮ್ಮ ಕಟ್ಟೆಮನೆಗಳೆಂದು ಕರೆದುಕೊಳ್ಳತೊಡಗಿದ್ದಾರೆ.

**ಹಬ್ಬ ಆಚರಣೆ**

ಬುಡಕಟ್ಟು ಸಂಸ್ಕೃತಿಯಲ್ಲಿ ಗುಗ್ಗರಿಹಬ್ಬ, ಶ್ರಾವಣ ಮಾಸದ ನಾಗಾರಾಧನೆ, ದೀಪಾವಳಿ,ಮುಂಗಾರಿಹಬ್ಬ ಮುಂತಾದ ಹಬ್ಬಗಳನ್ನು ಆಚರಿಸುತ್ತಾರೆ.

ಪಶುಪಾಲನೆಯೊಂದಿಗೆ ಕೃಷಿಯೂ ನಮ್ಮ ಪ್ರಾಚೀನರಲ್ಲಿ ಪ್ರಾರಂಭವಾದ ವಿವರಗಳನ್ನು ನಾವು ಇತಿಹಾಸದಲ್ಲಿ ಕಾಣುತ್ತೇವೆ. ಕೃಷಿ ಎಂದಾಗ ಮುಖ್ಯವಾಗಿ ಮಧ್ಯ ಕರ್ನಾಟಕದ ಪ್ರಮುಖ ಬೆಳೆ ರಾಗಿ,ಸಜ್ಜೆ,ಜೋಳ,ನವಣೆ ಮತ್ತು ದ್ವಿದಳ ದಾನ್ಯಗಳು ಅದರಲ್ಲೂ ಹುರಳಿ ಪ್ರಮುಖ ಬೆಳೆ. ಹುರುಳಿಯನ್ನು ದನಕರುಗಳಿಗೂ ಪೌಷ್ಟಿಕ ಆಹಾರವಾಗಿ ತಿನ್ನಿಸುವ ಅಭ್ಯಾಸವೂ ಇದೆ. ಇದರಿಂದಾಗಿ ಬೆಳೆದ ಬೆಳೆಯನ್ನು ತಮ್ಮ ದೈವಕ್ಕೆ ಅರ್ಪಿಸುವವರೆಗೂ ಬಳಸುವುದಿಲ್ಲ. ಕಾಳನ್ನು ಬೇಯಿಸಿ ಗುಗ್ಗರಿ ಮಾಡಿ ಜೋಳ,ಸಜ್ಜೆ ಅಥವಾ ನವಣೆಯನ್ನು ಕುಟ್ಟಿ ಅಕ್ಕಿ ಮಾಡಿ ಬೇಯಿಸಿ ಮೀಸಲಾಗಿರಿಸಿದ್ದ ಹಾಲು ಮೊಸರಿನೊಂದಿಗೆ ನೈವೇದ್ಯ ಮಾಡುತ್ತಾರೆ.ತೆಂಗಿನಕಾಯಿಯ ನೈವೇದ್ಯ ಇಲ್ಲ ಇತ್ತೀಚೆಗೆ ಸೇರಿಕೊಂಡಿದೆ. ಅಂದರೆ ಇಲ್ಲಿ ಸಾಂಕೇತಿಕವಾದ ಬಲಿಯೂ ಇಲ್ಲ. ಬದಲಾಗಿ ಬಾಳೆಹಣ್ಣಿನ ಪೂಜೆಯೇ ಇಲ್ಲಿ ಮುಖ್ಯವಾದುದು. ಈ ಗುಗ್ಗರಿ ಹಬ್ಬದಲ್ಲಿ ತಮ್ಮ ನಾಯಕನಿಗೆ ಸಂಬಂಧಿಸಿದ ಎತ್ತುಗಳನ್ನೂ ಕಾಡಿನಲ್ಲಿರುವ ಗೂಡುಗಳಿಂದ ಕರೆಯಿಸಿ ಅವುಗಳಿಗೂ ಪೂಜೆ ನೈವೇದ್ಯ ಮಾಡಲಾಗುತ್ತದೆ. ನಾಯಕನ ಪರಂಪರೆಗೆ ಸೇರಿದ ಪ್ರತಿ ಬೆಡಗಿನವರೂ ಈ ಹಬ್ಬದಲ್ಲಿ ಸಾಮೂಹಿಕವಾಗಿ ಪಾಲ್ಗೋಳ್ಳುತ್ತಾರೆ. ಕೆಲವೊಮ್ಮೆ ಇದನ್ನು ಅಮಾವಾಸ್ಯೆ ಹಬ್ಬ ಎಂದೂ ಕರೆಯುತ್ತಾರೆ. ಅಂದರೆ ತಮ್ಮ ಹಿರೀಕನಹಬ್ಬ ಎಂಬ ಅರ್ಥದಲ್ಲಿ ಆ ದಿನ ಪ್ರತಿ ಮನೆಯಲ್ಲಿಯೂ ಒಂದು ಮಣ್ಣಿನ ದೀಪ ಹಚ್ಚಿಟ್ಟು ಅದಕ್ಕೆ ಪೂಜೆ ಮಾಡಿ ಇಡೀ ರಾತ್ರಿ ದೀಪ ಉರಿಸುತ್ತಾರೆ. ರಾತ್ರಿಯಿಡೀ ಗುಡಿಯಲ್ಲಿ ಪೂಜೆ ನಡೆಯುವಾಗ ಮನೆಯಲ್ಲಿ ದೀಪ ಉರಿಯಬೇಕು. ಬೆಳಿಗ್ಗೆ ಮತ್ತೊಮ್ಮೆ ಪೂಜಿಸಿ ದೀಪ ಕಳುಹಿಸಿಕೊಡುವುದು ಸಂಪ್ರದಾಯ.

ಯುಗಾದಿ ಹಬ್ಬದ ಅಮಾವಾಸ್ಯೆ ಕಳೆದ ನಂತರ ಬರುವ ಅಮಾವಾಸ್ಯೆಯನ್ನು ಬಾದಾಮಿ ಅಮಾವಾಸ್ಯೆ ಎಂದು ಕರೆಯುತ್ತಾರೆ. ಆದಿನ ಮ್ಯಾಸನಾಯಕರಲ್ಲಿ ಮುಂಗಾರಿ ಹಬ್ಬದ ಆಚರಣೆ

ನಡೆಯುತ್ತದೆ. ಮೊದಲ ಕಾರಿಗೆ ಮುನ್ನ ಅದರ ಆರಂಭ ಬಯಸಿ ಸಮೃದ್ಧಿಯಾಗಲಿ ಎಂದು ದನಗಾಹಿಗಳಾದ ಇವರು ಬಯಸಿ ದೇವರಿಗೆ ಬೇಡಿಕೊಳ್ಳುವ ಆಚರಣೆಯಿದು. ಕಂಪಳದೇವರಲ್ಲಿ ಈ ವಿಶೇಷವಾದ ಪೂಜೆ ನಡೆಯುತ್ತದೆ. ಬಾದಾಮಿ ಅಮಾವ್ಯಾಸೆಯ ನಂತರ ಬರುವ ಶುಕ್ರವಾರ ಮೀಸಲು ಹಾಲನ್ನು ಕಾಯಿಸಿ ಬೆಣ್ಣೆತೆಗೆದು ಶನಿವಾರ ಮುಂಜಾನೆ ಗುಡಿಗೆ ಹೋಗುತ್ತಾರೆ. ಗುಡಿ ಎಂದರೆ ಇಲ್ಲಿ ಗುಡಿಸಲೇ ಗುಡಿ. ಗುಡಿಸಿಲಿನಲ್ಲಿ ಒಂದು ಎತ್ತಿನಕೊಂಬನ್ನು ಇರಿಸಿಕೊಂಡಿರುತ್ತಾರೆ.ಹಟ್ಟಿಯ ಮನೆಗಳವರು ಕೊಟ್ಟ ಬೆಣ್ಣೆಯನ್ನು ಈ ಕೊಂಬಿನಲ್ಲಿ ಶೇಖರಿಸಲಾಗುತ್ತದೆ. ಹಾಲನ್ನು ಕಾಯಿಸಿ ಮೊಸರನ್ನು ಮಾಡಿರುತ್ತಾರೆ. ನಗರಿಯವರು(ಒಂದು ಬೆಡಗಿನವರು) ಈ ಬೆಣ್ಣೆಯನ್ನು ಕಾಯಿಸಿ ಪೂಜೆಯ ವೇಳೆಗೆ ದೀಪ ಹಚ್ಚುತ್ತಾರೆ. ಶನಿವಾರ ಬೆಳಗಿನ ವೇಳೆಗೆ ವಿಶೇಷ ಪೂಜೆ,ಜೋಳದ ಅನ್ನ ಮತ್ತು ಮೊಸರನ್ನು ನೈವೇದ್ಯ ಮಾಡುತ್ತಾರೆ ನಂತರ ಎಲ್ಲರೂ ಒಟ್ಟಾಗಿ ಕಾಸಿಟ್ಟು ಸೂರ್ಯನಿಗೆ ನಮಸ್ಕರಿಸಿ ದೇವರಿಗೂ ನಮಸ್ಕರಿಸಿ ಉತ್ತಮ ಮಳೆ ಸುರಿಯಲಿ ಮುಂಗಾರು ಪ್ರಾರಂಭವಾಗಲಿ ಎಂದು ಬೇಡಿಕೊಳ್ಳುತ್ತಾರೆ. ಬೆಳಿಗ್ಗೆ ದಾಸೋಹ ನಂತರ ಎತ್ತುಗಳು ಬರುತ್ತವೆ. ಗದ್ದಿಗೆ ಹಾಕಿ ಕಾಸಿಟ್ಟು ಗೌರವ ತೋರಿ ಈ ಮೊದಲು ಅಕ್ಕಿ ಮತ್ತು ಅರಿಶಿಣ ಕುಟ್ಟಿ ತಯಾರಿಸಿದ ಭಂಡಾರವನ್ನು ಎತ್ತುಗಳು ಬಂದ ಕೂಡಲೇ ಅವುಗಳಿಗೆ ಹಚ್ಚಿ ಸುತ್ತಲೂ ತಿರುಗಿ ಭಂಡಾರವನ್ನು ಎತ್ತುಗಳ ಮೇಲೆ ಚೆಲ್ಲುತ್ತಾರೆ. ನಂತರ ಎರಿಪೋತುನಿಂದ ಅಲಗು ಸೇವೆ ನಡೆಯುತ್ತದೆ. ಎತ್ತುಗಳನ್ನು ಓಡಿಸುತ್ತಾರೆ. ದನಗಾಹಿಗಳಾದ ಈ ಸಮುದಾಯದಲ್ಲಿ ಹುಲ್ಲು ನೀರಿನ ಅವಶ್ಯಕತೆ ಜಾಸ್ತಿ ಅದರ ನಿಮಿತ್ತ ಮಳೆಗಾಗಿ ಪ್ರಾರ್ಥಿಸುವುದೇ ಈ ಮುಂಗಾರು ಹಬ್ಬದ ವಿಶೇಷವಾಗಿದೆ.

### ಸೂರ್ಯ ನಮಸ್ಕಾರ

ಪ್ರತಿ ದೇವಾಲಯದಲ್ಲಿ ಪ್ರತಿ ಹಬ್ಬದಲ್ಲೂ ತಮ್ಮ ದೈವಕ್ಕೆ ಪೂಜೆ ಸಲ್ಲಿಸಿದ ನಂತರ 'ಸೂರ್ಯನ ಮೊಕ್ಕು' ಎಂದು ಸಾಮೂಹಿಕವಾಗಿ ಗುಡಿಯ ಅಂಗಳದಲ್ಲಿ ಪೂಜಾರಿಯ ಜೊತೆಯಾಗಿ ನಿಂತು ಸೂರ್ಯನ ಕಡೆ ತಿರುಗಿ ನಮಸ್ಕರಿಸಿ ನಂತರ ಪರಸ್ಪರ ಕೈ ಮೊಕ್ಕು ಎಂದು ಕೈ ಕೈ ಮುಟ್ಟಿ ನಮಸ್ಕರಿಸಿಕೊಳ್ಳುತ್ತಾರೆ. ಇದೊಂದು ವಿಶಿಷ್ಟವಾದ ನಮನ. ಸಮುದಾಯದ ಸಾಮೂಹಿಕ ಬದುಕಿನ ಕ್ರಮದ ಒಂದು ಸ್ವರೂಪವಾಗಿ ಇಂದಿಗೂ ಉಳಿದುಬಂದಿದೆ.

### ಮೀಸಲು

ಹಬ್ಬದ ಆಚರಣೆಯ ಮುನ್ನಾದಿನದ ವೇಳೆಗೆ ತಮ್ಮ ನೆಲೆಯನ್ನು ಸುಣ್ಣ ಮಣ್ಣಿನಿಂದ ಬಳಿದು ಮಡಿ ಮಾಡಬೇಕು. ಆ ದಿನ ಸೂತಕದಲ್ಲಿರುವ ಮಹಿಳೆಯರು ಮನೆಯೊಳಗೆ ಇರುವಂತಿಲ್ಲ. ಸಾವಿನ ಸೂತಕದಲ್ಲಿರುವ ಮನೆಯಲ್ಲಿ ಮೀಸಲು ಹಾಕುವುದೇ ಇಲ್ಲ. ತಾವು ಸಾಕಿರುವ ಹಸು

ಎಮ್ಮೆಗಳಲ್ಲಿ ಮಡಿಯಿಂದ ಹಾಲು ಕರೆದು ಅದನ್ನು ದೇವಸ್ಥಾನಕ್ಕೆ ಒಪ್ಪಿಸುತ್ತಾರೆ. ಅಲ್ಲಿ ಹೀಗೆ ಎಲ್ಲಾ ಮನೆಯಿಂದ ತಂದ ಹಾಲನ್ನು ಕಾಯಿಸಿ ಮೊಸರು ಮಾಡಿ ಮರುದಿನ ಕಡೆದು ಬೆಣ್ಣೆ ತೆಗೆದು ದೇವರಿಗೆ ಪೂಜೆಯ ಸಂದರ್ಭದಲ್ಲಿ ದೀಪ ಹಚ್ಚಲು ಬಳಸುತ್ತಾರೆ. ಇದಲ್ಲದೆ ಎತ್ತಿನ ಗೂಡಿನಿಂದಲೂ ಕಿಲಾರಿಗಳು ಮೀಸಲು ಮೊಸರನ್ನು ಪೂಜೆಯ ವೇಳೆಗೆ ಬರಿಗಾಲಲ್ಲಿ ನಡೆದು ಹೊತ್ತು ತರುತ್ತಾರೆ. ಈ ಗೂಡಿನಿಂದ ಮೀಸಲು ಬಂದ ನಂತರವೇ ದೇವಾಲಯದಲ್ಲಿ ಕಾರ್ಯಚರಣೆ ಪ್ರಾರಂಭವಾಗುವುದು. ಈ ಮೊಸರನ್ನು ಜೋಳದ ಅನ್ನದೊಂದಿಗೆ ನೈವೇದ್ಯ ಮಾಡುತ್ತಾರೆ. ಉಳಿದಂತೆ ಎಲ್ಲವನ್ನು ಸೇರಿಸಿ ದಾಸೋಹಕ್ಕೆ ಬಳಸಲಾಗುತ್ತದೆ.

**ಕಾಸು**

ಹಬ್ಬದ ಆಚರಣೆಯಲ್ಲಿ ಪೂಜೆಯ ನಂತರ ಕರಿಕಂಬಳಿಯನ್ನು ಗದ್ದುಗೆಯೊಂದನ್ನು ಹಾಸಿ ಅದರ ಮೇಲೆ ಪ್ರತಿ ಮನೆಗೆ ಒಬ್ಬರಂತೆ ಒಂದು ಕಾಸು ಎಂದು ನಾಣ್ಯವನ್ನು ಇರಿಸಿ ನಮಸ್ಕರಿಸುತ್ತಾರೆ. ಇದು ತಮ್ಮ ಸಾಂಸ್ಕೃತಿಕ ನಾಯಕನಿಗೆ ಸಲ್ಲಿಸುವ ಗೌರವದ ಕಾಣಿಕೆಯಾಗಿದೆ. ಇದನ್ನು ಪೂಜಾರಿ ತೆಗೆದುಕೊಳ್ಳುತ್ತಾರೆ ಹಾಗೆಯೇ ಎತ್ತಿನಗೂಡಿನ ಬಳಿಹೋದಾಗ ಅಥವಾ ಎತ್ತುಗಳು ಗುಡಿಯ ಬಳಿ ಬಂದಾಗಲೂ ಹೀಗೆಯೇ ಅವುಗಳಿಗೂ ಕಾಸು ಇಡಲಾಗುತ್ತದೆ. ಅದನ್ನು ಪಟ್ಟದ ಕಿಲಾರಿ ತೆಗೆದುಕೊಳ್ಳುತ್ತಾರೆ.

**ಗಣೆ (ಕೊಳಲು)**

ಪಶುಪಾಲಕನಾದ ಶ್ರೀಕೃಷ್ಣನ ಕೈಯಲ್ಲಿರುವ ವಾದ್ಯವೇ ಕೊಳಲು. ಅದೇ ಮೂಲದಿಂದ ಬಂದವರು ತಾವು ಎಂದು ಹೇಳಿಕೊಳ್ಳುವ ಈ ಸಮುದಾಯದಲ್ಲಿಯೂ ಕಾಡುಗೊಲ್ಲರಲ್ಲಿ ಇರುವಂತೆ ಗಣೆಯನ್ನು ನುಡಿಸುವ ಪದ್ದತಿ ಇದೆ. ಕೊಳಲು ಆಕಾರದಲ್ಲಿಯೇ ಇರುವ ಉದ್ದನೆಯ ಬಿದರಿನಿಂದ ಮಾಡಿದ ವಾದ್ಯವಿದು. ಕಂಪಳದೇವರ ಗುಡಿಯಲ್ಲಿ ಮುಂಗಾರಿ ಹಬ್ಬದ ದಿನ ಈ ಗಣೆಯನ್ನು ನುಡಿಸುತ್ತಾ ಬಿದಿರನಲ್ಲಿನ ಪದವನ್ನು ಮತ್ತು ಪೆದೋಬಗಳೇಶನ ಸ್ತುತಿಯನ್ನು ನುಡಿಸಲಾಗುತ್ತದೆ. ಕಾಡಿನಲ್ಲಿ ಅಲೆಯುತ್ತಾ ಪಶುಪಾಲನೆಯನ್ನು ಮಾಡುತ್ತಿದ್ದ ಇವರು ಏಕತಾನತೆಯನ್ನು ಕಳೆದುಕೊಳ್ಳಲು ತಮ್ಮ ಪಶುಮಂದೆಯನ್ನು ತಮ್ಮ ಬಳಿ ಕರೆಯಲು ತಮ್ಮ ಹಿಂದೆ ಬರುವಂತೆ ಮಾಡಲು ಈ ಗಣೆಯನ್ನು ಬಳಸುತ್ತಿದ್ದು, ಈಗ ಒಂದು ಆಚರಣೆಯ ಸ್ವರೂಪದಲ್ಲಿ ಉಳಿದು ಬಂದಿದೆ.

**ಅಂಬು ವಾಸು ಕೊಯ್ಯುವುದು**

ಬೇಟೆಯ ಮೂಲದಿಂಧ ಪಶುಪಾಲನೆಯ ಕಡೆ ಮಾರ್ಪಾಡುಗೊಂಡ ಸಮುದಾಯವಿದು. ಹಾಗಾಗಿ ಈ ಬೇಟೆಯ ಪ್ರವೃತ್ತಿ ಮಾಂಸ ರಕ್ತದ ನೈವೇಧ್ಯದಲ್ಲಿರುವುದು ಆಚರಣಿಯ ರೂಪದಲ್ಲಿ ಉಳಿದು ಬಂದಿದೆ. ಅಂಬು ಎಂದರೆ ಚೂಪಾದ ಆಯುಧ ಎಂದಾಗುತ್ತದೆ. ವಾಸ್ ಎಂದರೆ

ಸಂಸ್ಕೃತದಲ್ಲಿ ಕತ್ತರಿಸು, ಕೊಯ್ಯು, ಚುಚ್ಚು ಎಂದರ್ಥ. ಇಲ್ಲಿ ಕುರಿಯನ್ನು ಕೊಯ್ಯುವ ವಿಧಾನವೇ ಅಂತಹದು. ಅಂಬು ವಾಸ್ ಅಂದರೆ ಚೂಪಾದ ಕತ್ತಿಯಿಂದ ಕುರಿಯ ಕತ್ತನ್ನು ವಾಸ್ ಗುಂಡಿನ(ನಿರ್ದಿಷ್ಟವಾದ ದೇವಾಲಯದ ಮುಂದಿರುವ ಕಲ್ಲು) ಮೇಲಿರಿಸಿ ಕುರಿಯನ್ನು ಅಂಗಾತಮಲಗಿಸಿ ಕತ್ತನ್ನು ಕತ್ತರಿಸಲಾಗುತ್ತದೆ. ಆ ರಕ್ತ ಆ ಗುಂಡಿನ ಮೇಲೆ ಚೆಲ್ಲಿರುತ್ತದೆ ಉಳಿದದ್ದನ್ನು ಅದರ ಪಕ್ಕದ ಗುಂಡಿಯಲ್ಲಿ ಹಾಕಿಮುಚ್ಚಲಾಗುತ್ತದೆ. ಕಾಡುಗೊಲ್ಲರಲ್ಲಿಯೂ ಈ ಪದ್ಧತಿ ಇದೆ ಡಾ. ಮೀರಾಸಾಬಿಹಳ್ಳಿ ಶಿವಣ್ಣನವರು ಇದನ್ನು ಅಪರಕ್ರಿಯಯೆಂತೆ ಇದೆ ಎಂದು ಅಭಿಪ್ರಾಯ ಪಡುತ್ತಾರೆ."[೫]

**ಉಡುಪು**

ಈ ಬುಡಕಟ್ಟಿನಲ್ಲಿ ಪುರುಷರು ಮೂಲತಃ ಧರಿಸುತ್ತಿದ್ದುದು ಮೊಣಕಾಲು ಮೇಲಕ್ಕಿರುವ ಒಂದು ಬಿಳಿಯ ಒರಟಾದ ಬಟ್ಟೆಯಿಂದ ಹೊಲಿದ ಚಲ್ಲಣ, ತಲೆಗೊಂದು ಬಿಳಿಯ ಬಣ್ಣದ್ದೇ ರುಮಾಲು ಅಥವಾ ಪೇಟ, ಬರಿಮೈಗೆ ಹೊದೆಯಲು ಬಳಿಯ ಹಚ್ಚದ ಅಥವಾ ಕರಿಕಂಬಳಿ, ಕೈಯಲ್ಲಿ ಕೋಲು ಕಿವಿಗೆ ಹತ್ತ ಕಡಕುಗಳು ಕೆಲವೊಮ್ಮೆ ಹೆಗಲ ಮೇಲೆ ಮಡಚಿದ ಅಥವಾ ಹೊದೆದ ಕಂಬಳಿ ಈಗಲೂ ಮ್ಯಾಸಬೇಡರು ಇನ್ನು ಆದಷ್ಟು ಮೂಲಸ್ಥಿತಿಯಲ್ಲಿಯೇ ಉಳಿದಿರುವ ಕಂಪಳದೇವರಹಟ್ಟಿಯಲ್ಲಿ ಇದೇ ಧರಿಸು ಧರಿಸಿರುವ ಎಂದು ಮೈಗೆ ಅಂಗಿಯನ್ನು ತೊಡದೆ ಇರುವವರೂ ಇದ್ದಾರೆ. ಪದ್ದತಿಯನ್ನು ಬಿಡಲಾಗದು ಎಂಬ ಮನೋಭಾವನೆ ಅಲ್ಲದೆ ಇತ್ತೀಚಿನ ಜನ ತುಂಬು ಬಟ್ಟೆಯನ್ನು ಧರಿಸುತ್ತಾರೆ. ಆದರೆ ಧಾರ್ಮಿಕ ಕ್ರಿಯೆಗಳಲ್ಲಿ ಪಾಲ್ಗೊಳ್ಳುವಾಗ ಕಡ್ಡಾಯವಾಗಿ ಈ ಸಂಪ್ರಾದಾಯಿಕ ಉಡುಪನ್ನೇ ಧರಿಸುತ್ತಾರೆ. ಮ್ಯಾಸನಾಯಕರು ವಾಸಿಸುವ ಎಲ್ಲಾ ನೆಲೆಗಳಲ್ಲಿಯೂ ಈಗ ಸಾಕಷ್ಟು ಬದಲಾವಣೆಯಾಗಿದ್ದು ಇದು ಆರಾಧನೆ ಆಚರಣೆಯ ಸಂದರ್ಭಗಳಲ್ಲಿ ಮಾತ್ರ ಉಳಿದುಬಂದಿದೆ. ಕಂಪಳದೇವರ ಪೂಜಾರಿಯಾಗಿರುವ ಕಾಲೇಜು ಕಂಡ ಶ್ರೀಯುತ ರೇವಣ್ಣನವರು ಸಹ ಸದಾ ಧರಿಸುವುದು ಉದ್ದನೆಯ ಒಂದು ಪಾದ ಮುಚ್ಚುವಂತೆ ಉಟ್ಟಿರುವ ಬಿಳಿಯ ಪಂಚೆ ತಲೆಗೆ ಬಿಳಿಯ ಬಟ್ಟೆಯನ್ನು ಹೊದ್ದಿರುತ್ತಾರೆ. ಬುಡಕಟ್ಟಿನ ನಿಯಮವನ್ನು ನಿಷ್ಠೆಯಿಂದ ಪಾಲಿಸುವ ವಿಧಾನ ಇಲ್ಲಿ ಅಚ್ಚರಿ ಮೂಡಿಸಿದೆ.

ಮ್ಯಾಸನಾಯಕರ ಹಟ್ಟಿಯ ಮಹಿಳೆಯ ಉಡುಪೆಂದರೆ ಬಿಳಿಯ ಸೀರೆ, ರವಿಕೆ ಇಲ್ಲ ಮೈತುಂಬಾ ಸೀರೆಯ ಸೆರಗನ್ನು ಹೊದ್ದಿರುತ್ತಿದ್ದ ಇವರ ಕೈತುಂಬಾ ದಪ್ಪ ಗಾಜಿನ ಬಳೆಗಳು ಮತ್ತು ಬೆಳ್ಳಿಯ ಕಡಗ, ಕಿವಿಗೆ ಬುಗುಡಿ ಮತ್ತು ಓಲೆ ಸ್ವಲ್ಪ ಸ್ಥಿತಿವಂತರಾಗಿದ್ದರೆ ಕೋರಳಿಗೆ ಚಿಂತಾಕು ಎಂದು ಕರೆಯಲ್ಪಡುತ್ತಿದ್ದ ಪಟ್ಟಿಯಂತಹ ಆಭರಣ, ಬೆಳ್ಳಿಯ ಚಿಕ್ಕ ವಿನ್ಯಾಸದ ಕಡಗಗಳು ಕಾಲಿಗೆ ಗೆಜ್ಜೆ ಧರಿಸುತ್ತಿರಲಿಲ್ಲ. ಕಾರಣ ನಮ್ಮ ದೇವರ ಎತ್ತುಗಳಿಗೆ ಕಾಲಿಗೆ ಗಗ್ಗರ ಇತ್ಯಾದಿ

ಆಭರಣ ತೊಡಿಸುತ್ತೇವಾದ್ದರಿಂದ ಅದು ದೇವರಿಗೆ ಸಲ್ಲಬೇಕಾದುದೆ ಹೊರತು ತಾವು ಧರಿಸುವಂತಿಲ್ಲ ಎಂದು ಕಾಲಿಗೆ ಕಾಲುಂಗರ ಇಲ್ಲಿ ಕರಿಮಣಿ ಸರ, ತವರಿನವರು ಕೊಟ್ಟಿದ್ದ ಬುಡತಾಳಿ ಅದಕ್ಕೆ ಕಟ್ಟಿಕೊಳ್ಳುತ್ತಿದ್ದರು. ಮದುವೆಯಲ್ಲಿ ತಾಳಿ ಇಲ್ಲದೆ ಕರಿಮಣಿ ಮಾತ್ರ ಕೆಲವರು ಕಟ್ಟುತ್ತಿದ್ದರು.

**ಸಾಹಿತ್ಯ –ಸಂಗೀತ**

ಮ್ಯಾಸಬೇಡರಲ್ಲಿ ಕಾಡುಗೊಲ್ಲರಲ್ಲಿರುವಂತೆ ಸಮೃದ್ಧವಾದ ಸಾಹಿತ್ಯವಿಲ್ಲ ಎಂಬುದು ಇವೆರಡನ್ನು ಹೋಲಿಸಿ ನೋಡುವ ಅಧ್ಯಯನಕಾರರ ಅಭಿಪ್ರಾಯವಾಗಿದೆ. ಆದರೆ ಸಮುದಾಯದ ಹೊಳಹೊಕ್ಕು ನೋಡಿದಾಗ ಸಾಕಷ್ಟು ಸಾಹಿತ್ಯವನ್ನು ತಮ್ಮ ಸೃಜನಶೀಲ ಗುಣದಿಂದ ಕಟ್ಟಿ ಸ್ಮರಣಿಯಲ್ಲಿ ಉಳಿಸಿಕೊಂಡು ಬಂದಿದ್ದಾರೆ. ಈ ಜನಪದರ ಪ್ರತಿಯೊಬ್ಬ ನಾಯಕನಿಗೆ ಸಂಬಂಧಿಸಿದ ಕಥನಗಳಿವೆ. ಶುಭಕಾರ್ಯಗಳಂತೂ ಸೋಬಾನೆ ಪದಗಳಿಲ್ಲದೆ ನಡೆಯುವುದೇ ಇಲ್ಲ. ಸಸಿ ನೆಡುವ, ಬಿತ್ತುವ ಕೊಯ್ಲು ಮಾಡುವ ತಿಂಗಳ ಮಾಮನ ಪದಗಳು, ಗಂಗೆ ಗೌರಿ ಪದಗಳು,ಎತ್ತುಗಳ ಮೇಲೆ ಹಾಡುವ ಪದಗಳು ಜೊತೆಗೆ ಕಥೆಗಳು, ಒಗಟು, ಗಾದೆ, ಹೀಗೆ ಸಮೃದ್ಧವಾದ ಸಾಹಿತ್ಯ ಭಂಡಾರವೇ ಇಲ್ಲದೆ ಪುರುಷರು ಕೂಡ ಸಮುದಾಯದ ಸಾಂಸ್ಕೃತಿಕ ನಾಯಕರನ್ನು ಕುರಿತು ಹಾಡುತ್ತಾರೆ.

ಪದ್ಯ–ಕಥನಗಳಲ್ಲಿ ದಾಖಲಾಗದ ಎಷ್ಟೋ ಸಮುದಾಯಕ್ಕೆ ಸಂಬಂಧಿಸಿದ ಕಥೆ, ಇತಿಹಾಸವನ್ನು ಪುರುಷರು ಗದ್ಯದಲ್ಲಿ ಹೇಳುತ್ತಾರೆ. ಕ್ಷೇತ್ರಕಾರ್ಯದಲ್ಲಿ ನನ್ನ ಗಮನಕ್ಕೆ ಬಂದಿರುವ ಸಂಗತಿಯಿದು. ಎತ್ತುಗಳನ್ನು ಕುರಿತು ಕೋಲು ಪದಕಟ್ಟಿ ತೆಲುಗಿನಲ್ಲಿ ಹಾಡುತ್ತಾರೆ. ಇಲ್ಲಿರುವ ಇನ್ನೊಂದು ವಿಶೇಷವೆಂದರೆ ಇದರ ಮೂಲಭಾಷೆ ತೆಲುಗು. ಪರಿಸರದ ಭಾಷೆ ಕನ್ನಡ. ಹೀಗಾಗಿ ಒಂದು ಬಗೆಯ ಗೊಂದಲವೂ ಸಾಹಿತ್ಯ ಸೃಷ್ಟಿಯಲ್ಲಿ ತಲೆದೋರಿರಬಹುದು ಕಥನಗಳನ್ನೆಲ್ಲಾ ಕನ್ನಡದಲ್ಲೇ ಹಾಡುತ್ತಾರೆ. ಜಗಲೂರಜ್ಜನ ಕಾವ್ಯ ಪೆದೋಬಳೇಶನ ಕಾವ್ಯವನ್ನು ತೆಲುಗಿನಲ್ಲಿ ಹಾಡುತ್ತಾರೆ ಪರಿಸರದ ಭಾಷೆಯನ್ನು ಕಲಿತು ಅದರಲ್ಲೇ ಕಥನಗಳನ್ನು ಕಟ್ಟಿ ಹಾಡುವ ಇವರಲ್ಲಿ ಕಲಾ ಸೃಷ್ಟಿಗೆ ಕಾರಣವಾಗುವ ಸೃಜನಶೀಲತೆ ಸಾಕಷ್ಟಿದೆ ಎಂದೆ ಹೇಳಬಹುದು, ಅಷ್ಟೇ ಅಲ್ಲದೇ ಈ ಕಥನಗಳನ್ನು ಹಾಡುವ ದಾಟಿಯೂ ವೈವಿಧ್ಯಮಾಯವಾದುದು. ಒಂದು ಕಥನದಲ್ಲಿ ಕನಿಷ್ಠ ಆರೇಳು ಧ್ವನಿಗಳನ್ನು ಹಾಕಿಕೊಳ್ಳುತ್ತಾರೆ. ಹಿಮ್ಮೇಳ ಮುಮ್ಮೇಳ ಮಾಡಿಕೊಂಡು ಹಾಡುವ ಮಹಿಳೆಯರ ಮೇಳ ರಾತ್ರಿಯಿಡೀ ದಣಿಯಿಲ್ಲದೆ ಹಾಡುತ್ತಾರೆ. ಈ ಸಾಹಿತ್ಯದ ಮೂಲಕ ತಮ್ಮ ಬುಡಕಟ್ಟಿನ ಇತಿಹಾಸವನ್ನು ಸಂಸ್ಕೃತಿಯನ್ನು ದಾಖಲೆಯಲ್ಲಿಟ್ಟುಕೊಂಡು ಬಂದಿದ್ದಾರೆ. ತನ್ನ ಸಮುದಾಯದ ಬದುಕಿನ ವಿವರಗಳನ್ನು ಕೊಡುವುದರೊಂದಿಗೆ ತಾನು ಬದುಕಿ ಬಾಳಬೇಕಾಗಿರುವ ಇತರ ಸಮುದಾಯಗಳ ಸಾಮಾಜಿಕ ಸ್ಥಿತಿಗತಿಗಳನ್ನು ಹೇಳುತ್ತಲೇ ಒಟ್ಟಾರೆ ತುಂಬಾ ಜವಾಬ್ದಾರಿಯಿಂದ

ಒಟ್ಟು ಅಥವಾ ಕೇಳಿಸಿಕೊಳ್ಳುವುದರ ಮೂಲಕ ಒಂದು ಸಾಮಾಜಿಕ ಅಧ್ಯಯನ ಮಾಡಲು ಒಂದು ಸಾಧ್ಯವಾಗುತ್ತದೆಂಬುದೇ ಈ ಸಾಹಿತ್ಯದ ವಿಶೇಷ.

ಜನಪದ ಸಾಹಿತ್ಯದ ಪ್ರಕಾರಗಳಲ್ಲಿ ಗಾದೆ ಪ್ರಮುಖವಾದುದು. ಮಾತಿನ ನಡುವೆಯೇ ಸಹಜವಾದ ಅನುಭವದ ಮೂಸೆಯಲ್ಲಿ ಅರಳುತ್ತದೆ. ಮ್ಯಾಸಬೇಡರ ಭಾಷೆ ತೆಲಗು ಆಗಿರುವುದರಿಂದ ಗಾದೆಗಳನ್ನು ತೆಲುಗಿನಲ್ಲಿಕಟ್ಟಿಕೊಂಡಿದ್ದಾರೆ. ಉದಾಹರಣಗೆ 'ಕುಂಟದಿ ಕೂಡಿ ಪೆಟ್ಟೆ,ಗುಡ್ಡಿದಿ ಪಾವಕಟ್ಟಿ' ಅಂದರೆ ಕುಂಟಿ ಕೂಡಿಟ್ಟರೆ ಕುರುಡಿ ಹಾಳು ಮಾಡಿದಳು ಎಂದರ್ಥ. 'ಗಂಜಿಕೆ ಲೇದು ಲಂಜಿಕೆ ಬುಲಾಕ್' ಅಂದರೆ ಗಂಜಿಗೆ ಗತಿ ಇಲ್ಲದಿದ್ದರೂ ತಮ್ಮ ವೇಶ್ಯೆಗೆ ಬುಲಾಕು ಮಾಡಿಸಿಕೊಟ್ಟ ಎಂಬ ಅರ್ಥ. 'ಕೂಲಿ ಚೇಸ್ತೆ ಕುಂಡಗಾಲೆ ಲ್ಯಾಕಪೋತೆ ಎಂಡಗಾಲೆ' ಕೂಲಿ ಮಾಡಿದರೆ ಮನೆಯಲ್ಲಿ ಮಡಿಕೆ ಕಾಯುತ್ತದೆ.ಇಲ್ಲವಾದರೆ ಬಿಸಿಲಿಗೆ ಒಣಗುವುದೇ ಗತಿ ಎಂದರ್ಥ. ಹೀಗೆ ಅನೇಕ ಗಾದೆಗಳನ್ನು ಇಲ್ಲಿ ಕಾಣಬಹುದು. ಇಷ್ಟಲ್ಲದೆ ಒಡಪುಗಳ ಸಂಗ್ರಹವೂ ಇಲ್ಲಿ ಸಾಕಷ್ಟಿದೆ. ಉದಾಹರಣಗೆ " ಬಳ್ಳಾರ್ಲ ಬಾವಿಸೂಡು ಬಾವಿಕೆ ನೀಳ್ಳೂಕೊಚ್ಚೆ ಆಟದಿ ಸೂಡು ಆಟದಿ ಸೇತಲಾನೆ ಕಡವು ಸೋಡು, ಕಡವು ಮಿಂದ ಉನ್ನ ಚೇಯಿಸೂಡು ಚೇತಮೀದ ಪಚ್ಚೆಸೋಡು ಪಚ್ಚೆಸೂಸಿ ನನ್ನ ಮೆಚ್ಚಿ ಒಚ್ಚಿನಾರು" ಮಲ್ಲಯ್ಯ ಇದರ ಅರ್ಥ ಬಳ್ಳಾರಿಯಲ್ಲಿರುವ ಬಾವಿ ನೋಡು,ಬಾವಿಗೆ ಬರುವ ಹೆಣ್ಣು ನೋಡು ಆಕೆಯ ಕೈಯಲ್ಲಿರುವ ಬಿಂದಿಗೆ ನೋಡು, ಬಿಂದಿಗೆ ಮೇಲಿರುವ ಕೈ ನೋಡು ಕೈ ಮೇಲಿನ ಹಚ್ಚೆನೋಡು ಹಚ್ಚೆ ನೋಡಿ ನನ್ನ ಮೆಚ್ಚಿ ಬಂದವರು ಎಂದು ತನ್ನ ಗಂಡನ ಹೆಸರನ್ನು ಕಾವ್ಯಮಯವಾಗಿ ಹೇಳುವ ಜಾಣೆಯರು ಇವರು.

**ಕೋಲಾಟ**

ಪ್ರದರ್ಶನ ಕಲೆಗಳಲ್ಲಿ ಒಂದಾಗಿರುವ ಕೋಲಾಟವೂ ಮ್ಯಾಸಬೇಡರಲ್ಲಿ ರೂಢಿಯಲ್ಲಿದೆ.ರಾತ್ರಿಯ ವೇಳೆ ಎತ್ತಿನ ಗೂಡುಗಳ ಬಳಿ ಸಾಂಸ್ಕೃತಿಕ ನಾಯಕನ ಜಾತ್ರೆ ಇತರೆ ಸಂದರ್ಭಗಳಲ್ಲಿ ಕಾಲಿಗೆ ಗೆಜ್ಜೆ ಕಟ್ಟಿ ಪದಗಳನ್ನು ಹಾಡುತ್ತಾ ಕೋಲು ಹಾಕುತ್ತಾರೆ. ಅಲೆಮಾರಿ ಪಶುಪಾಲಕ ಸಮುದಾಯದವರಾದ ಇವರು ರಾತ್ರಿಯ ವೇಳೆ ಎತ್ತಿನ ಗೂಡುಗಳ ಬಳಿ ಬೇಸರ ಕಳೆಯಲು ಕೋಲಾಟವನ್ನು ರೂಢಿಸಿಕೊಂಡಿರುವ ಸಾಧ್ಯತೆಗಳಿವೆ. ಇಲ್ಲಿ ಸಾಂಸ್ಕೃತಿಕ ನಾಯಕರಿಗೆ ಸಂಬಂಧಿಸಿದ ಎತ್ತುಗಳ ಮೇಲಾಟಕ್ಕೆ ಸಂಬಂಧಿಸಿದ ಹಾಡುಗಳೇ ಹೆಚ್ಚು. ಮತ್ತೊಂದು ವಿಶೇಷವೆಂದರೆ ತಮ್ಮ ಪ್ರೇಯಸಿಯನ್ನು ಕುರಿತು ಕಟ್ಟಿ ಹಾಡುವ ಕೋಲಾಟದ ಪದಗಳು ಸಮುದಾಯದ ಚಿಕ್ಕ ಹುಡುಗ–ಹುಡುಗಿಯರಿಗೂ ಕೋಲಾಟ ಕಲಿಸಿ ಆಡಿಸುವ ವಿಧಾನಗಳಿವೆ.

**ಜಾತ್ರೆಯ ಕುಣಿತ**

ಸಾಂಸ್ಕೃತಿಕ ನಾಯಕನ ಆರಾಧನೆ ನಿಮಿತ್ತ ಏರ್ಪಡಿಸುವ ಜಾತ್ರೆಗಳಲ್ಲಿ ಪುರುಷರು ಎತ್ತುಗಳ ಸುತ್ತ ನವಿಲುಗರಿ ಮತ್ತು ಬೆಳ್ಳಿಯ ಹಿಡಿದಿರುವ ಚವರಿ ಕೋಲುಗಳನ್ನು ಹಿಡಿದು ಲಯಬದ್ಧವಾಗಿ

ಉರುಮೆ ವಾದ್ಯದ ಶಬ್ದ ಗತಿಗೆ ತಕ್ಕಂತೆ ಲಯಬದ್ಧವಾಗಿ ಕುಣಿಯುತ್ತಾರೆ. ಗುಂಪಾಗಿ ಒಂದೆಡೆ ನಿಂತು ಕುಣಿಯುತ್ತಾರೆ. ಭಂಡಾರವನ್ನು ಎತ್ತುಗಳ ಮೇಲೆ ಎರಚುತ್ತಲೂ ಬಸವಂತಗಳಾಡುವುದು ಎಂದು ಸುತ್ತಲೂ ಕುಣಿಯುತ್ತಾರೆ.

**ಬಯಲಾಟ**

ಬಹುಶ: ಕಾಡಿನ ನೆಲೆಯಿಂದ ನಿಶ್ಚಿತವಾಗಿ ಒಂದೆಡೆ ನೆಲೆ ನಿಂತು ಹಟ್ಟಿ ಗ್ರಾಮ ಎಂದು ಬದುಕುವ ಸಂದರ್ಭ ಪ್ರಾರಂಭವಾದಾಗ ಕಲಿತಿರುವ ಕಲಾಪ್ರಕಾರವಿದು ಎನಿಸುತ್ತದೆ.ಅಲ್ಲಿ ಬಳಕೆಯಾಗುವ ತಾಳ,ಹಾರ್ಮೋನಿಯಂ,ಮದ್ದಲೆ ಇವೆಲ್ಲಾ ಶಿಷ್ಟ ಸಂಸ್ಕೃತಿಯಲ್ಲಿವಂತಹವು. ಇದು ಬಹುಶಃ ತಾನು ನೆಲೆಗೊಂಡಿರುವ ಅರೆಶಿಷ್ಟ ಸಂಸ್ಕೃತಿಯಿಂದ ರೂಢಿಸಿಕೊಂಡ ಕಲೆ ಎನಿಸುತ್ತದೆ. ಆದರೆ ಇಂದು ಮಧ್ಯ ಕರ್ನಾಟಕದ ಹಳ್ಳಿಗಳಲ್ಲಿ ಬಯಲಾಟ ಆಡುವವರೆಂದರೆ ನಾಯಕರೇ. ಶಿಕ್ಷಣ ಇಲ್ಲದವರೂ ಕೂಡ ಕೇಳಿ ಕಲಿತು ಸಂಭಾಷಣೆಯಲ್ಲಿ ಒಪ್ಪವಾಗಿ ಒಪ್ಪಿಸುವಂತಹ ಪ್ರವೀಣರು. ಈಗ ಈ ಪರಿಸರದಲ್ಲಿ ಜಾತ್ರೆಗಳ ಸಂದರ್ಭದಲ್ಲಿ ನಾಯಕರದು ಬಯಲಾಟ. ಅಷ್ಟೇ ಬಹುಸಂಖ್ಯಾತರಾದ ಈ ಸೀಮೆಯ ಜನ ಸಾಮಾಜಿಕ ನಾಟಕಗಳ ಕಡೆ ವಾಲಿದ್ದಾರೆ.

**ಬೇಟೆ**

ಇತಿಹಾಸತಜ್ಞರು ಮಾನವನ ಬದುಕಿನ ವಿಕಾಸವನ್ನು ಮೂರು ಹಂತಗಳಲ್ಲಿ ಗುರುತಿಸುತ್ತಾರೆ. ಆಹಾರ ಸಂಗ್ರಹಣೆಯ ಹಂತ, ಆಹಾರ ಉತ್ಪಾದನೆಯ ಹಂತ ಇವೆರಡರ ಮಧ್ಯೆ ಇದ್ದುದ್ದು ಪಶುಪಾಲನೆ ಹಂತ. ಉತ್ಪಾದನೆ ಹಂತ ಎಂದಾಗ ಅಲ್ಲಾಗಲೆ  ಕೃಷಿಯನ್ನು ಕಲಿತಿದ್ದ ಮಾನವ ಒಂದರ ನಂತರ ಮೊತ್ತೊಂದು ಎಂದು ವಿಭಾಗಿಸಿದ್ದಾಗ್ಯೂ ಒಂದನೇ ಹಂತ, ಎರಡನೇ, ಮೂರನೆ ಹಂತದಲ್ಲು ಸ್ವಲ್ಪ ಮಟ್ಟಿಗಾದರೂ ಜೊತೆಗೂಡಿಯೇ ಇರುತ್ತದೆ. ಕೊನೆಗೆ ಆಚರಣೆ ರೂಪದಲ್ಲಾದರೂ ಉಳಿದಿರುತ್ತದೆ. ಇದು ಸಮುದಾಯ ಒಂದರ ಯಾವುದೇ ಸಾಂಸ್ಕೃತಿಕ ವಿವರಕ್ಕೂ ಸಾಮಾನ್ಯವಾಗಿ ಅನ್ವಯವಾಗುತ್ತದೆ. ಆಹಾರದ ಕ್ರಮ ಬದಲಾದರೆ ಹಳೆಯದು ಹಬ್ಬ ಹರಿದಿನಗಳಲ್ಲಿ ಒಂದು ಆಚರಣೆ ನಿಮಿತ್ತವಾಗಿಯಾದರೂ ಮರುಬಳಕೆಯಾಗುತ್ತದೆ. ಉಡುಗೆ ತೊಡುಗೆಗಳಲ್ಲಿ ಎಷ್ಟೇ ಆಧುನಿಕತೆಯನ್ನು ಮನುಷ್ಯ ರೂಢಿಸಿಕೊಂಡಿದ್ದರೂ ಮೂಲ ಒಂದು ಆಚರಣೆಯಾಗಿ ಹಬ್ಬಹರಿದಿನ, ವಿವಾಹ ಇತರ ಕಾರ್ಯಗಳಲ್ಲಿ ಹಳೇಯ ರೂಪ ಧಿರುಸುಗಳು ಬಳಸಲ್ಪಡುತ್ತವೆ.

ಮೂಲದಲ್ಲಿ ಬೇಟೆಗಾರರಾಗಿದ್ದ ಮ್ಯಾಸಬೇಡರು ಅರಸರ ಪಡೆಗಳಲ್ಲಿ ಮುಂದಾಳುಗಳಾಗಿ ಸೇವೆ ಸಲ್ಲಿಸಿ ಪಾಳೆಯಪಟ್ಟುಗಳನ್ನು ಕಟ್ಟಿ ಆಳಿದ ನಂತರ ಇವರ ನಾಯಕತ್ವ ಗುಣವೇ ಕಾರಣವಾಗಿ ನಾಯಕರೆನಿಸಿದರು. ವಿಶೇಷವೆಂದರೆ ವಾರ್ಷಿಕೆಯಾದ ಬೇಟೆಗೆ ಸಮುದಾಯದ ಯುವಕರು ಜೊತೆಗೆ ಒಂದಿಷ್ಟು ಹಿರಿಯರು ಹಂದಿಬೇಟೆಗೆ ಹೋಗುವುದು ಸಾಮಾನ್ಯವಾಗಿದೆ. ಏಕೆಂದರೆ

ವಿರಳವಾಗಿರುವ ಕಾಡುಗಳಲ್ಲಿ ಇವರಿಗೆ ಸಿಗುವ ಬೇಟೆಯಾದರೂ ಯಾವುದು.? ಕಾಡುಹಂದಿ ಬಿಟ್ಟರೆ ಬೇರೆ ಇಲ್ಲ. ಸಂರಕ್ಷಿತ ಪವಿತ್ರ ಅರಣ್ಯಗಳಲ್ಲಿ ಬೇಟೆ ನಿಷಿದ್ಧ. ಹಾಗಾಗಿ ಊರ ಹೊಲಗಳ ಮತ್ತು ಕಾಡಿನ ಮಧ್ಯೆ ಇರುವ ಅಂಚಿನಲ್ಲಿಯೇ ಈ ಬೇಟೆಯ ಪಾರುಪತ್ಯ ಜರುಗಬೇಕು. ಬೇಟೆಗೆ ಹೋಗುವ ದಿನವನ್ನು ಮೊದಲೇ ಎಲ್ಲರೂ ಕಲೆತು ನಿಶ್ಚಯಿಸುತ್ತಾರೆ. ಕೆಲವು ಹಟ್ಟಿಗಳಲ್ಲಿ ಯುಗಾದಿ ಕಳೆದ ಮೂರನೆ ದಿನ ಹೋಗುತ್ತಾರೆ. ಇದಾಗಲೇ ಪೂರ್ವ ನಿಶ್ಚಿತ ಎಲ್ಲರೂ ಒಂದೆಡೆ ಕಲೆತು ಮನೆಯ ಮೂಲೆಯಲ್ಲಿರುವ ಭರ್ಚಿ, ಈಟಿ, ಕತ್ತಿ, ಕುಡುಗೋಲು, ಕೊಡಲಿ, ಬಡಿಗೆ ಹಿಡಿದು ಊರಬುಡ್ಡೇಕಲ್ಲಿನ ಬಳಿ ಸೇರುತ್ತಾರೆ. ಈ ಆಯುಧಗಳನ್ನು ಕೈಯಲ್ಲಿಹಿಡಿದು ಕುಣಿಯುತ್ತ ಕೇಕೆ ಹಾಕುತ್ತ ತಮಟೆ ಸದ್ದಿನ ನಡುವೆ ಈ ಬೇಡರ ಪಡೆ ಬುಡ್ಡೇಕಲ್ಲಿನ ಬಳಿ ಬರುತ್ತದೆ. ಅಲ್ಲಿ ಪೂಜೆ ಸಲ್ಲಿಸಿ ಕಾಡಿನ ಕಡೆ ನಡೆಯುತ್ತಾರೆ. ಬೇಟೆ ಸಿಗುವವರೆಗೆ ಊರಿಗೆ ಹಿಂದಿರುಗುವುದಿಲ್ಲ. ಇತ್ತೀಚಿಗೆ ಒಂದು ಹಂದಿ, ನರಿ, ಮೊಲ ಸಿಗುವುದು ಕಷ್ಟವೆ. ಒಂದೆರಡು ದಿನ ಅಲ್ಲಿಯೇಕಳೆಯಬೇಕಾಗಿ ಬಂದು ಊರಿನಿಂದ ಊಟಪೂರೈಸುವುದು ಉಂಟು. ಬೇಟೆ ಸಿಕ್ಕನಂತರ ಊರಿಗೆ ಹಿಂದಿರುಗುತ್ತಾರೆ. ಆಗಲೂ ಮತ್ತೆ ಅದೇ ಸಂಭ್ರಮ. ವಿಜಯೋತ್ಸವದಿಂದ ಬರುವ ಇವರಿಗೆ ಮಹಿಳೆಯರ ಆರತಿಯ ಸ್ವಾಗತ. ಬುಡ್ಡೇಕಲ್ಲಿನ ಬಳಿ ಬೇಟೆಯಾಡಿಕೊಂಡು ಬಂದ ಪ್ರಾಣಿಯ ಕಾಲಿನ ಉಗುರು, ಬಾಲ, ಕಿವಿಯನ್ನು ಕತ್ತರಿಸಿ 'ಹುಲುಸು' ಎಂದು ಒಂದು ಗುಂಡಿತೋಡಿ ಹೂಳುತ್ತಾರೆ.[೬] ಆಗ ಯಾರಾದರೂ ಪರಊರಿನವರು ಹೊಂಚು ಹಾಕಿ ಕಾದಿದ್ದು ಈ 'ಹುಲುಸು'ನ್ನು ತಮ್ಮ ಊರಿಗೆ ಕೊಂಡ್ಯೈಯುವುದುಂಟು. ಆಗ ಊರ ಹಟ್ಟಿಯ ಸಂಮೃದ್ಧಿ ತಪ್ಪಿಹೋಯಿತು. ಅಶುಭ ಎಂಬ ಭಾವನೆ ಇದೆ. ಹಾಗಾಗಿ ಯಾರೂ ನುಸುಳದಂತೆ ಎಚ್ಚರ ವಹಿಸುತ್ತಾರೆ. ನಂತರ ಊರಲ್ಲೆಲ್ಲಾ ತಂದ ಬೇಟೆಯನ್ನು ಮೆರವಣಿಗೆ ಮಾಡಿ ಅದನ್ನು ಆಯಗಾರರಿಗೆ ಕೊಡಲಾಗುತ್ತದೆ. ಇಲ್ಲಿ ತಿನ್ನುವ ಆಸೆಗಿಂತ ಕಾಡಿಗೆ ಹೋಗಿ ಬೇಟೆಯಾಡಬೇಕೆಂಬ ಹುಮ್ಮಸ್ಸೇ ಹೆಚ್ಚು. ಈ ಹುಮಸ್ಸಿನ ಹಿಂದೆ ಸಮುದಾಯದ ಮೂಲ ಪ್ರವೃತ್ತಿ ಕೆಲಸಮಾಡುತ್ತದೆ. ಹೀಗೆ ಮೂಲತಃ ಇದ್ದ ಬದುಕಿನ ವಿಧಾನವು ಹೊಸವ್ಯವಸ್ಥೆಯೊಂದು ಅಲ್ಲಿ ನಿರ್ಮಾಣಗೊಂಡ ನಂತರ ಈ ಹಳೆಯ ವಿಧಾನವನ್ನು ಉಳಿಸಿಕೊಂಡೇ ಕೆಲವು ದಿನ ಸಾಗುತ್ತದೆ. ಮೂಲ ಸ್ಥಿತಿಯಿಂದ ಬಹುದೂರ ಸಾಗಿಬಂದ ಮೇಲೆ ಆ ಮೂಲ ಕೇವಲ ಸಾಂಪ್ರದಾಯಿಕ ಆಚರಣೆರೂಪದಲ್ಲಿಯಾದರೂ ಉಳಿದುಕೊಳ್ಳುತ್ತದೆ. ಇಂದು ಬೇರೆ ಬೇರೆ ವೃತ್ತಿಗಳಲ್ಲಿ ತೊಡಗಿಸಿಕೊಂಡಿರುವ ಬುಡಕಟ್ಟು ಜನತೆಯ ಬೇಟೆ ಯುಗಾದಿ ಹಬ್ಬದ ದಿನ ಎಲ್ಲರೂ ಒಟ್ಟಾಗಿ ಹೋಗಿ ಬೇಟೆಯಾಡಿ ಬರುವುದು ಒಂದು ಸಂಪ್ರದಾಯವಾಗಿದೆ. ಹಾಗೆಯೇ ಪಶುಸಂಪತ್ತು ಆರಾಧನಾ ಸ್ವರೂಪದಲ್ಲಿ ಸಂರಕ್ಷಿಸಪಡುತ್ತಿದ್ದು ನಿರ್ದಿಷ್ಟ ನಾಯಕನ ವಾರ್ಷಿಕ ಹಬ್ಬದಲ್ಲಿ ಆತನ ನೆಲೆ ಇರುವಲ್ಲಿಗೇ ಹೋಗಿ ಅವುಗಳಿಗೆ ಗೌರವ ಸೂಚಿಸುವ ಆಚರಣೆಯಾಗಿ ಉಳಿದು ಬಂದಿದೆ.

## ವೈದ್ಯ

ಈ ಬುಡಕಟ್ಟಿನಲ್ಲಿ ಮನುಷ್ಯರಿಗೂ ಮತ್ತು ದನಕರುಗಳಿಗೂ ವೈದ್ಯಕೀಯ ಮಾಡುವ ಕೆಲವರು ಪಾರಾಂಪರಿಕ ವೈದ್ಯರಿದ್ದಾರೆ. ಗಿಡ ಮೂಲಿಕೆಗಳ ಚೂರ್ಣವನ್ನು ಅವರೆ ತಯಾರಿಸಿ ಅನೇಕ ಖಾಯಿಲೆಗಳನ್ನು ಪರಿಹರಿಸುತ್ತಿದ್ದಾರೆ. ಈ ಪರಂಪರೆಯ ಜ್ಞಾನವನ್ನು ಇಂದು ಮುಂದುವರಿಸಿಕೊಂಡು ಬಂದಿದ್ದಾರೆ.

ದನಕರುಗಳನ್ನು ಕಾಡುವ ಚಪ್ಪೆರೋಗ, ಕಾಲುಬಾಯಿಜ್ವರ,ಸೆಲೆ ರೋಗಗಳಿಗೆಲ್ಲಾ ಔಷದಿ ಕೊಡುತ್ತಾರೆ. ಕಾಲು ಮುರಿತಕ್ಕೂ ಕಟ್ಟು ಕಟ್ಟಿ ಸರಿಪಡಿಸುವ ವೈದ್ಯರಿದ್ದಾರೆ. ಮನುಷ್ಯರಿಗೆ ಜ್ವರಕ್ಕೆ ವಿಷಮಶೀತ ಜ್ವರಕ್ಕೆ ಬೇವಿನ ಬಳ್ನಾಲಿನ ಕಷಾಯವನ್ನು, ಸಾಮಾನ್ಯ ಜ್ವರಕ್ಕೆ ಕಾಡು ಜೀರಿಗೆ ಕಷಾಯವನ್ನು, ಹಾವು ಮತ್ತು ಚೇಳಿನ ಕಡಿತಕ್ಕೆ,ಬಂಜೆತನ ನಿವಾರಣೆಗೆ ಮಾನಸಿಕ ಅಸ್ವಸ್ಥತೆ ಸರಿಹೋಗುವಂತಹ ಔಷದಿ ಘನ ಪಂಡಿತರು ಈ ಸಮುದಾಯದಲ್ಲಿದ್ದಾರೆ. ಕುಮತಿಬೊಂಡೂಬಂಡೆ ಓಬಯ್ಯ ಮೂಳೆ ಮುರಿದರೆ ನಾಟಿ ಔಷದಿ ಮೂಲಕ ಗುಣಪಡಿಸುತ್ತಾರೆ ಈ ಭಾಗದಲ್ಲಿ ಇವರು ಖ್ಯಾತರಾಗಿದ್ದಾರೆ.

ಬುಡಕಟ್ಟಿಗೆ ಸಂಬಂಧಿಸಿದ ಈ ಸಾಂಸ್ಕೃತಿಕ ವಿಶಿಷ್ಟತೆಗಳು ಇಂದು ಪೂರ್ಣ ಪ್ರಮಾಣದಲ್ಲಿ ಉಳಿದಿಲ್ಲ ತೀರಾ ಸಾಂಪ್ರದಾಯಿಕವಾಗಿ ಬುಡಕಟ್ಟಿನ ನಿಯಮಗಳನ್ನು ಪಾಲಿಸಿಕೊಂಡು ಹಟ್ಟಿಗಳಲ್ಲಿ ಈ ನಡುವಳಿಕೆಗಳು ಇಂದಿಗೂ ಉಳಿದಿವೆ. ಉಳಿದಂತೆ ಊರು ನಗರ ವಾಸಿಗಳಾಗಿರುವ ಜನರಲ್ಲಿ ಒಂದು ಆಚರಣೆ ಸ್ವರೂಪದಲ್ಲಿ ಸಾಂಕೇತಿಕವಾಗಿ ಉಳಿದು ಬಂದಿರುವುದನ್ನು ಗಮನಿಸಲಾಗಿದೆ. ಕಾಲದ ಮರೆಗೆ ಸರಿಯುತ್ತಿರುವ ಇಂಥ ಸಂಗತಿಗಳ ಮೂಲಕವೇ ಅದಿಮ ಸಂಸ್ಕೃತಿಯ ವಿವರಗಳನ್ನು ಕಟ್ಟಿಕೊಳ್ಳಲು ಸಾದ್ಯವಾಗುತ್ತದೆ ಮತ್ತು ಇಲ್ಲಿರುವ ಸೂಕ್ಷ್ಮವಾದ ಎಳೆಗಳನ್ನು ಹಿಡಿದು ವರ್ತಮಾನ ಮಾದರಿಯೊಂದನ್ನು ಕಟ್ಟಿಕೊಳ್ಳಬಹುದಾದ ಸಾಧ್ಯತೆಗಳೂ ಇರುತ್ತವೆ.

**ಅಡಿಟಿಪ್ಪಣಿಗಳು**

೧. ಶಂಭಾ ಜೋಷಿ : "ಸಂಸ್ಕೃತಿಯು ಆರಂಭವಾದ ಬಗೆ", ಶಂಭಾ ಕೃತಿ ಸಂಪುಟ, ಕರ್ನಾಟಕ ಸಂಸ್ಕೃತಿ–೨ ಪುಟ ೨೧೬

೨. "ಪ್ರಾಚೀನ ಭಾರತದ ಚರಿತ್ರೆ", ಮೂಲ. ಅನುವಾದ ಬಾಲಗೋಪಾಲ್ ಕನ್ನಡಕ್ಕೆ ಅನುವಾದ ಎಚ್.ಎಸ್.ಶ್ರೀಮತಿ ಪುಟ–೨

೩. ಮೊರ– ಬಿದಿರಿನಿಂದ ತಯಾರಿಸಿದ ಉಪಕರಣ, ಕಾಳು ಹಸನುಮಾಡಲು ಬಳಸುವ ಸಾಧನ

೪. ವಿರೂಪಾಕ್ಷಿ ಪೂಜಾರಹಳ್ಳಿ : "ನ್ಯಾಯ ಪಂಚಾಯಿತಿ ಕಟ್ಟೆಮನೆಗಳು" ಲೇಖನ

೫. ಮೀರಾಸಾಬಿಹಳ್ಳಿ ಶಿವಣ್ಣ : ಮ್ಯಾಸಮಂಡಲ, ಕನ್ನಡ ಪುಸ್ತಕ ಪ್ರಾದಿಕಾರ, ಬೆಂಗಳೂರು. ಪುಟ.೧೪

೬. ವಿರೂಪಾಕ್ಷಿ ಪೂಜಾರಹಳ್ಳಿ : "ಬೇಟೆ ಮತ್ತು ಬೇಡರು", ಚಿನ್ನಹಗರಿಪ್ರಕಾಶನ, ಕೆ.ಬಿ.ಹಟ್ಟಿ ಪೂಜಾರಹಳ್ಳಿ ಬಳ್ಳಾರಿ ಜಿಲ್ಲೆ. ಪುಟ–೫

## ಅಧ್ಯಾಯ : ಏಳು

# ಆಚರಣೆ ಮತ್ತು ಸಂಪ್ರದಾಯಗಳ ಹಿನ್ನೆಲೆಯಲ್ಲಿ ವಿವಿಧ ಸಮುದಾಯಗಳ ಸಾಂಸ್ಕೃತಿಕ ಬಾಂಧವ್ಯ

ವಿಶ್ವ ಸೃಷ್ಟಿಯ ವೈಚಿತ್ರಗಳಿಗೆ ಸ್ಪಂದಿಸುವ ಮಾನವನ ಮನಸ್ಸು ವಿಸ್ಮಯಗೊಳ್ಳುತ್ತದೆ."[೧] ಸೃಷ್ಟಿಯ ಅನಂತತೆಯೊಂದಿಗೆ,ಬಾಳಿನ ಆಶಯಗಳನ್ನು ಅನನ್ಯ ಗೊಳಿಸುವ ಸಂದರ್ಭಗಳಲ್ಲಿ ಮನುಷ್ಯ ಭಯ ಭೀತಿಗಳಿಂದ ತಲ್ಲಣಗೊಳ್ಳುವುದು ಸಹಜ. ಅಪರಿಮಿತವಾದ ಪ್ರಕೃತಿಯೊಂದಿಗೆ ಜೀವನದ ಪರಿವಲಯವನ್ನು ರೂಪಿಸಿಕೊಳ್ಳುವ ಸನ್ನಿವೇಶಗಳಲ್ಲಿ ಬದುಕಿನ ಮಿತಿಗಳು ಮನವರಿಕೆಯಾಗುತ್ತವೆ. ನಿಸರ್ಗದತ್ತವಾದ ಜೀವನವನ್ನು ಕಾಡುವ ಕೊರತೆಗಳು ಕಳವಳಗೊಳಿಸುತ್ತವೆ. ಇಂತಹ ಸಂದರ್ಭಗಳಿಂದ ಮುಕ್ತನಾಗಲು ಹಂಬಲಿಸುವ ಮನುಷ್ಯ ಕೆಲವು ಆಚರಣೆಗಳಿಂದ ಪ್ರಕೃತಿಯನ್ನು ಆರಾಧಿಸುತ್ತಾನೆ."[೨]

ನೈಸರ್ಗಿಕ ವಿಕೋಪಗಳೊಂದಿಗೆ ದೈಹಿಕ ಮತ್ತು ಮಾನಸಿಕ ಸಮಸ್ಯೆಗಳಿಂದ ಕೂಡಿದ ತನ್ನ ಅಸ್ತಿತ್ವವನ್ನು ಸಮನ್ವಯಗೊಳಿಸಲು ಯತ್ನಿಸುತ್ತಾನೆ. ಆದ್ದರಿಂದ ಅಗೋಚರ ಹಾಗೂ ಅತಿಮಾನವ ಶಕ್ತಿಯ ನೆಲೆಗಳಾದ ಪಂಚಭೂತಗಳನ್ನು ಆರಾಧಿಸುತ್ತಾನೆ."[೩] ಈ ಹಿನ್ನಲೆಯಲ್ಲಿ ನದಿ ಕಣಿವೆ,ಬೆಟ್ಟ-ಗುಡ,ಗಿಡಮರಗಳನ್ನು ಭಕ್ತಿ ಪೂರ್ವಕವಾಗಿ ಪೂಜಿಸಿ ತನ್ನ ಇಷ್ಟಾರ್ಥಗಳನ್ನು ಪೂರೈಸುವಂತೆ ಪ್ರಾರ್ಥಿಸುತ್ತಾನೆ. ಹೀಗೆ ಪರಂಪರೆಯೊಂದಿಗೆ ಬೆಳೆದು ಬಂದ ಆರಾಧನೆಗಳು ಆಚರಣೆಗಳಾಗುತ್ತವೆ. ಇಂಥ ಆಚರಣೆಗಳನ್ನು ಎಲ್ಲಾ ಸಮುದಾಯದವರು ಈ ಪರಿಸರದಲ್ಲಿ ಆಚರಿಸುತ್ತಾರೆ.

ಚಿನ್ನಹಗರಿ ನದಿಯಲ್ಲಿ ನೀರಿನಿಂದ ಆವೃತವಾಗಿರುವ ಕಲ್ಲುಗಳೇ ಅಕ್ಕಮ್ಮನ ಗುಂಡುಗಳು. ಹೆಣ್ಣು ಮಕ್ಕಳು ಗಂಗೆಯ ಪೂಜೆಯನ್ನು ಮಾಡುವುದು ಸಾಮಾನ್ಯವಾದರೂ ನದಿಯಲ್ಲಿನ ಗುಂಡುಗಳಿಗೆ ಪ್ರತ್ಯೇಕವಾಗಿ ನೈವೇದ್ಯ ಮಾಡಿ ಪೂಜೆಸುವುದು ಗಮನಾರ್ಹ ಸಂಗತಿ. ಋತುಮತಿಯರಾದಾಗ, ವಿವಾಹ ಸಂದರ್ಭದಲ್ಲಿ, ವಧುವಿನ ಶಾಸ್ತ್ರಗಳನ್ನು ಪೂರೈಸುವಾಗ, ಬಾಣಂತನದ ಮೈಲಿಗೆಯಿಂದ ಶುದ್ಧಿ ಪಡೆಯುವ ಶಾಸ್ತ್ರಗಳನ್ನು ಆಚರಿಸುವಾಗ ನದಿಗೆ ಬಂದು ಗಂಗೆಯ ಪೂಜೆಯನ್ನು ಮಾಡುವುದಲ್ಲದೆ ಪ್ರತ್ಯೇಕವಾಗಿ ಅಕ್ಕಮ್ಮನನ್ನು ಆಚರಿಸುತ್ತಾರೆ. ಆದರೆ ಈ ಎರಡು ಆಚರಣೆಗಳ ಉದ್ದೇಶಗಳು ಭಿನ್ನವಾದಂಥವುಗಳು. ತಮಗೆ ಒಳ್ಳೆಯದಾಗಲೆಂದು, ಆರೋಗ್ಯ ಐಶ್ವರ್ಯ ಸಂಪತ್ತುಗಳು ವೃದ್ಧಿಸಲೆಂದು ಗಂಗಮ್ಮವನ್ನು ಆರಾಧಿಸುತ್ತಾರೆ. ಆದರೆ ಆಂತರಿಕ ಸಮಸ್ಯೆಗಳನ್ನು ಪರಿಹರಿಸುವಂತೆ ಅಕ್ಕಮ್ಮನನ್ನು ಕೋರುತ್ತಾರೆ. ಹೂವು,ಹಣ್ಣು ಅರಿಶಿನ-ಕುಂಕುಮಗಳನ್ನಿಟ್ಟು ಎಲೆ ಅಡಿಕೆಗಳನ್ನು ಅಂಗತವಾಗಿ ನೀರಿನಲ್ಲಿ ತೇಲಿ ಹೀಗೆ ಗಂಗೆ ಕೊಟ್ಟ ತಾಂಬೂಲವು ಮುಳುಗದೆ ತೇಲುತ್ತಾ ಹೋದರೆ ಒಳ್ಳೆಯದಾಗುತ್ತದೆಂದು ನಂಬಿಕೆ.

ಕೆಲವು ಕೃಷಿ ಸಂಬಂಧಿ ಚಟುವಟಿಕೆಗಳ ಸಂದರ್ಭದಲ್ಲಿ ಗಂಗೆಯನ್ನು ಪೂಜಿಸುವುದು ಸಾಮಾನ್ಯ ಸಂಗತಿ. ಸಕಾಲಕ್ಕೆ ಸರಿಯಾಗಿ ಮಳೆಬಾರದಿದ್ದಾಗ, ಸಮೃದ್ಧವಾಗಿ ಫಸಲು ಬೆಳೆಯದಿದ್ದಾಗ. ಒಳ್ಳೆಯದಾಗಲೆಂದು ಆಶಿಸಿ ಮುತ್ತೈದೆಯರು ಗಂಗಮ್ಮನ ಪೂಜೆಯನ್ನು ಮಾಡುತ್ತಾರೆ. ಅಲ್ಲದೆ ಸಮೃದ್ಧ ಮಳೆಯಿಂದಾಗಿ ನದಿ ತುಂಬಿ ಹರಿಯುವಾಗಲೂ ಕೆರೆಕಟ್ಟೆಗಳು ತುಂಬಿ ಕೊಡಿ ಬಿದ್ದ ಸಂದರ್ಭಗಳಲ್ಲಿ ಪೂಜಿಸುತ್ತಾರೆ. ಕೆರೆಯ ಗಂಗಮ್ಮನನ್ನು ತೊಬಿನ ಮುಂದೆ ಪೂಜಿಸಿ, ಅದೇ ಸಮಯದಲ್ಲಿ ಕೆರೆಕಟ್ಟೆ ಬಾವಿಗಳಿಗೆ ಪೂಜೆ ಮಾಡುವಾಗ ಅಕ್ಕಮ್ಮನ ಆಚರಣೆಯೂ ಪೂರಕವೆಂಬಂತೆ ನಡೆಯುತ್ತದೆ."[೪]

ನೀರಿಗೆ ಸಂಬಂಧಪಟ್ಟ ಅನೇಕ ಹಬ್ಬ ಆಚರಣೆಗಳಿವೆ. ಅದರಲ್ಲಿ ಗೌರಿ ಗಣೇಶ ಹಬ್ಬವೂ ಒಂದು. ಗೌರಿ ದೇವತೆ ನೀರನ್ನು ಸಂಕೇತಿಸುವ ದೇವತೆ ಹಾಗೂ ಗಣಪತಿಯ ತಾಯಿಯು ಹೌದು. ಮಣ್ಣಿನಿಂದ ತಯಾರಿಸಿ ಗಣಪತಿಯನ್ನು ಪೂಜಿಸಿ ಪುನಃನೀರಿಗೆ ಬಿಡುವುದು ಭೂಮಿ ಮತ್ತು ನೀರಿನ ಸಂಬಂಧವನ್ನು ಸಂಕೇತಿಸುತ್ತದೆ. ಜೀವಸೃಷ್ಟಿಗೆ ಆಹಾರ ಒದಗಿಸುವಲ್ಲಿ ಮಣ್ಣು ಮತ್ತು ನೀರಿನ ಪಾತ್ರ ಹಿರಿದಾದುದು. ಗಣೇಶನನ್ನು ಮಣ್ಣಿನಿಂದಲೇ ತಯಾರಿಸಿ ಸುಡದೆ ಪೂಜಿಸಿ ನಂತರ ಜಲಧಿಯಲ್ಲಿ ವಿಸರ್ಜಿಸುವ ಆಚರಣೆಯಲ್ಲಿ ಪ್ರಕೃತಿ ಮತ್ತು ಗಣಪತಿಯನ್ನು ಏಕವಾಗಿಸಿಕೊಂಡಿರುವ ತತ್ವವೊಂದು ಮಹತ್ವ ಪಡೆದಿದೆ. ನೀರನ್ನು ತಾಯಿಯ ಸ್ಥಾನದಲ್ಲಿಟ್ಟು ಗೌರವಿಸಲಾಗಿದೆ"[೫] ಆಹಾರವನ್ನು ಒದಗಿಸುವ ಭೂಮಿಯನ್ನು ಭೂಮಿ ತಾಯಿ ಎಂದು ಕರೆದು ಪೂಜಿಸಲಾಗುತ್ತದೆ. ನೀರನ್ನು ತಾಯಿ ಎಂದು ಭಾವಿಸಲಾಗಿದೆ. ನೆಲ, ಜಲ, ಗಾಳಿ, ಅಗ್ನಿ ಹಾಗೂ ಆಕಾಶಗಳನ್ನು ಪಂಚಭೂತಗಳೆಂದು ಭಾವಿಸಿ ಪೂಜಿಸಲಾಗುತ್ತಿದೆ. ಜಕಣಿಗಳಿಗೆ ಎಡೆ ಇಡುವಾಗ ಲೋಟಗಳಲ್ಲಿ ನೀರನ್ನು ತುಂಬಿ ಮಾವಿನ ಎಲೆ ಸಿಕ್ಕಸಿ ಮಣಿಯ ಮೇಲಿಟ್ಟು ಪೂಜಿಸುವ ಪದ್ಧತಿ ರೂಢಿಯಲ್ಲಿದೆ. ಇದರಿಂದಾಗಿ ನೀರಿಲ್ಲದೆ ಮನುಷ್ಯ ಜೀವಕೋಟಿಯ ಬದುಕನ್ನು ಊಹಿಸಲು ಸಾಧ್ಯವಿಲ್ಲವೆನ್ನುವುದು ತಿಳಿದುಬರುತ್ತದೆ.

ನೀರಿಲ್ಲದೆ ಶಿಷ್ಟ ಹಾಗೂ ಜನಪದ ಆಚರಣೆ, ಶಾಸ್ತ್ರ, ವಿಧಿ ಮತ್ತು ಪೂಜೆಗಳು ನಡೆಯಲಾರವು. ಹುಟ್ಟು ಮದುವೆ ಸಾವಿನಂತಹ ಜೀವನಾವರ್ತನದ ಹಾಗೂ ಹಬ್ಬ ಜಾತ್ರೆ ಇತ್ಯಾದಿ ವಾರ್ಷಿಕಾವರ್ತನದ ಆಚರಣೆಗಳಲ್ಲಿ ನೀರು ಪ್ರಮುಖ ಪಾತ್ರವಹಿಸಿದೆ. ಜಾತ್ರೆ ಅಥವಾ ಹಬ್ಬ ನಡೆಯುವ ಮುನ್ನಾದಿನ ದೇವರ ವಿಗ್ರಹವನ್ನು ಮೆರವಣಿಗೆಯಲ್ಲಿ ಸಾಗಿ ನದಿಯಲ್ಲಿ ಪೂಜೆ ಸಲ್ಲಿಸುತ್ತಾರೆ. ಹೊಸ ಗಡಿಗೆ ಅಥವಾ ಕಂಚು ಹಿತ್ತಾಳೆ ಕೊಡದಲ್ಲಿ ನೀರನ್ನು ತುಂಬಿಸಿ ಕೊಂಡು ಕೊಡವನ್ನು ತಂದು ಕಳಸ ಪ್ರತಿಷ್ಠಾಪನೆ ಮಾಡುತ್ತಾರೆ. ಜಾತ್ರೆಯ ನಂತರ ನೀರನ್ನು ಅದೇ ಜಲ ಮೂಲಕ್ಕೆ ವಿಸರ್ಜಿಸಲಾಗುತ್ತದೆ. ಈ ಹಿನ್ನೆಲೆಯಲ್ಲಿ ನೀರಿನ ಮೂಲಗಳು ದೈವ ಸನ್ನಿಧಿಗಳಾಗಿ ಸ್ವೀಕಾರವಾಗಿರುವ ಅಂಶ ತಿಳಿದುಬರುತ್ತದೆ.

**ಜಾತ್ರೆಗಳು**

ಜಾತ್ರೆ ಭಾರತೀಯ ಸಂಸ್ಕೃತಿಯ ವಿಶಿಷ್ಟ ಸಮಾಜೋಧಾರ್ಮಿಕ ಪ್ರಕ್ರೀಯೆಯಾಗಿದೆ. ಜಾತ್ರೆ ಎಂದಾಕ್ಷಣ ಎಲ್ಲಾರಿಗೂ ಆಕರ್ಷಣೆ. ಪ್ರಾಚೀನ ಕಾಲದಿಂದೂ ನಂಬಿಕೊಂಡಿರುವ ದೇವದೇವತೆಗಳನ್ನು ಭಯಭಕ್ತಿಯಿಂದ ಗುಂಪಾಗಿ ಪೂಜಿಸಿ ಪ್ರಾರ್ಥಿಸಿದ ಜನಸಮೂಹವೇ ಜಾತ್ರೆ. ಜಾತ್ರೆ ಜಾತಿ ವರ್ಗಗಳ ಮೇಲುಕೀಳು ಮಡಿ ಮೈಲಿಗೆಯನ್ನು ಮೀರಿ ಜನಸಮುದಾಯ ಮತೀಯ ವಿಧಿ ಆಚರಣೆಯ ನೆಪದಲ್ಲಿ ದೈವವೊಂದರ ಸುತ್ತ ನಿರ್ದಿಷ್ಟ ದಿನಗಳಂದು ನೆರೆಯುವುದನ್ನು ಜಾತ್ರೆ ಎನ್ನಬಹುದು."[೬] ಬಹುತೇಕ ವಾರ್ಷೀಕ ಆವರ್ತನೆಯಲ್ಲಿರುವ ಜಾತ್ರೆಗಳು ಸಾರ್ವಜನಿಕ ಸ್ವರೂಪವಾಗಿವೆ. ಚಿನ್ನಹಗರಿನದಿ ಪರಿಸರದಲ್ಲಿ ಬರುವ ಗಂಜಿಗಟ್ಟೆ, ಗೊಡಬನಹಾಳ್, ಹಿರೆಗುಂಟನೂರು, ಕ್ಯಾಸಾಪುರ, ದೇವಪುರದಹಟ್ಟಿ, ಮುಷ್ಟೂರು, ಕಂಪಳದೇವರಹಟ್ಟಿ, ಸಿದ್ದಯ್ಯನಕೋಟೆ, ನುಂಕೆಮಲೆ, ಬ್ರಹ್ಮಗಿರಿ, ಜಟಂಗಿ ರಾಮೇಶ್ವರಗಳಲ್ಲಿ ಜಾತ್ರೆಗಳು ವಿಶೇಷವಾಗಿ ನಡೆಯುತ್ತವೆ. ಈ ಎಲ್ಲಾ ಧಾರ್ಮಿಕ ಕ್ಷೇತ್ರಗಳು ಬಗ್ಗೆ ಸಂಕ್ಷಿಪ್ತವಾಗಿ ಅಧ್ಯಯನ ಮಾಡಲಾಗಿದೆ.

ಧಾರ್ಮಿಕ ಸ್ವರೂಪದ ಹಿನ್ನಲೆಯಲ್ಲಿ ಹುಟ್ಟಿಕೊಂಡು ಬಂದ ಯಾವುದೇ ಜಾತ್ರೆಯಲ್ಲಿ ಗಂಡು-ಹೆಣ್ಣು ಬಡವ-ಬಲ್ಲಿದ, ಊರುಕೇರಿ, ಜಾತಿಬೇದವಿಲ್ಲದೆ ಜನರು ಕೊಡುವುದರಿಂದ ಜಾತ್ರೆಗಳು ಸಾಮಾಜಿಕ ಭಾವೈಕ್ಯತೆಯ ಸಂಕೇತವಾಗಿವೆ. ಗ್ರಾಮದ ಒಂದು ಸಮುದಾಯದ ಜನರು ಒಂದೆಡೆ ಬೆರೆತು ನಡೆಸುವ ಜಾತ್ರೆಗಳು ಕೋಮು ಸೌಹಾರ್ದತೆಯ ಪ್ರತೀಕಗಳಾಗಿವೆ.

ಜಾತ್ರೆಗಳಲ್ಲಿ ಹಲವು ಹತ್ತಾರು ಅಭಿರುಚಿಯುಳ್ಳ ಜನರು ನೆರೆದಿರುವುದರಿಂದ ಅವರನ್ನೆಲ್ಲಾ ಆನಂದ ಪಡಿಸಲು ಧಾರ್ಮಿಕ ಉಪನ್ಯಾಸ, ಕೀರ್ತನೆ, ಪುರಾಣಗಳ ಜೊತೆಗೆ ಮನೋರಂಜನೆ ಸಂಗೀತ, ನೃತ್ಯ ಕಲೆಗಳ ಪ್ರದರ್ಶನಗಳನ್ನು ಏರ್ಪಡಿಸಿ ಆ ಮೂಲಕ ಕಲಾವಿದರನ್ನು ಸನ್ಮಾನಿಸುತ್ತಾರೆ. ಜಾತ್ರೆಗಳ ಅಂಗವಾಗಿ ದೇವಸ್ಥಾನದಲ್ಲಿ ಜರುಗುವ ವಿದ್ವಾಂಸರ ಉಪನ್ಯಾಸ ಹಾಗೂ ಕಲಾವಿದರ ಪ್ರದರ್ಶನಗಳು ಭಾವುಕರ ಮನಗಳನ್ನು ತಣಿಸಿದರೆ ದೇವಸ್ಥಾನ ಹೊರಗಿರುವ ಅಂಗಡಿಗಳು ನಾನಾ ಬಗೆಯ ವಸ್ತುಗಳು ಎಲ್ಲರ ಮನಸ್ಸಿನಲ್ಲಿ ಆಸೆ ಹುಟ್ಟಿಸಿ ಅವರ ನಾಲಿಗೆಯ ಮೇಲೆ ನೀರೂರುವಂತೆ ಮಾಡುತ್ತವೆ. ಪಾತ್ರೆ ಅಂಗಡಿ, ಬಟ್ಟೆ ಅಂಗಡಿ, ಹೂವು ಹಣ್ಣು ಕಾಯಿ ಅಂಗಡಿಗಳು, ಬೆಂಡು ಬೆತ್ತಾಸ ಇತ್ಯಾದಿ ಅಂಗಡಿಯ ಸಾಲುಗಳು ದಾರಿಹೋಕರ ಭಕ್ತರನ್ನು ಕೈಬೀಸಿ ಕರೆಯುತ್ತವೆ. ಆಟಪಾಠ ವಿನೋದಗಳ ಜೊತೆಗೆ ಹಳ್ಳಿಗರಿಗೆ ವರ್ಷಕ್ಕೊಮ್ಮೆ ಮನೋರಂಜನೆ ಒದಗಿಸುವ ಬಯಲಾಟಗಳಲ್ಲದೆ ಕೋತಿ ಕುಣಿಸುವುದು, ಮೋಡಿಯಾಟ, ಕರಡಿಯಾಡಿಸುವುದು, ಅಗ್ನಿಕುಂಡ ಪ್ರವೇಶ, ಚಾಟಿಯಿಂದ ಹೊಡೆದುಕೊಳ್ಳುವುದು, ಬೇವಿನಸೀರೆ, ಸಿಡಿ ಉತ್ಸವ, ರಥೋತ್ಸವ,

ಚೆರಗ, ರಾಶಿಬುತ್ತಿ, ಸಿದ್ದಭುಕ್ತಿ ಇತ್ಯಾದಿ ಜನಪದ ಕಲೆಗಳ ಪ್ರದರ್ಶನ ಜನಪದ ವಾದ್ಯಗಳಾದ ಡೋಳ್ಳು, ತಮಟೆ ಬಡಿತ ಉರುಮೆ ಬಡಿತ ಜೂಜಾಟಗಳನ್ನು ಜಾತ್ರೆಗಳಲ್ಲಿ ಕಾಣುತ್ತೇವೆ.

ಜಾತ್ರೆಯ ಸಮಯದಲ್ಲಿ ರೈತರು, ರೈತ ಕಾರ್ಮಿಕರು ಹಾಗೂ ಊರಿನ ಎತ್ತುಗಳಿಗೆ ವಿಶ್ರಾಂತಿ ದೊರೆಯುತ್ತದೆ. ಇದರಿಂದ ಜನರಲ್ಲಿ ಹೊಸ ಚೈತನ್ಯ ಉಂಟಾಗಿ ಉತ್ಸಾಹದಿಂದ ತಮ್ಮ ತಮ್ಮ ಕಾರ್ಯಗಳಲ್ಲಿ ತೊಡಗಲು ಜಾತ್ರೆಗಳು ಸಹಾಯವಾಗಿವೆ. ದೇವರು ಧರ್ಮದ ವಾರ್ಷಿಕೋತ್ಸವಗಳಾದ ಜಾತ್ರೆಗಳಲ್ಲಿ ಆಚರಿಸುವ ಪೂಜಾ ದಿನಗಳು ಬಹಳ ಮುಖ್ಯವಾಗಿರುತ್ತಿದ್ದವು. ಪ್ರಸ್ತುತ ಅಧ್ಯಾಯದಲ್ಲಿ ಜನಸಾಮಾನ್ಯರ ಬದುಕಿಗೆ ಜಾತ್ರೆಗಳ ಕೊಡುಗೆಯನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

ಜಾತ್ರೆ ಸಮೀಪಿಸುತ್ತಲೇ ಊರಿನ ಜನ ತಮ್ಮ ಮನೆಗಳನ್ನು ಸಿಂಗರಿಸುತ್ತಾರೆ. ರಥೋತ್ಸವ ಜಾತ್ರೆಯಲ್ಲಿ ಖರೀದಿ ಮಾಡಿದ್ದು ಪವಿತ್ರವೆಂದು ತಿಳಿದು ತಮ್ಮ ಜೀವನಕ್ಕೆ ಬೇಕಾದ ಸಾಮಾನುಗಳನ್ನು ಖರೀದಿಸುವುದು ಸಾಮಾನ್ಯ ಪದ್ದತಿಯಾಗಿದೆ. ಜನಿಗೆಹಳ್ಳ ಪರಿಸರದಲ್ಲಿರುವ ಕಲ್ಲೆದೇವರಪುರ ಕಲ್ಲೇಶ್ವರ ಜಾತ್ರೆಯಲ್ಲಿ ದನಗಳ ದೊಡ್ಡ ಜಾತ್ರೆ ವಿಶೇಷವಾಗಿರುತ್ತದೆ. ಈ ಜಾತ್ರೆ ಒಂದು ತಿಂಗಳಿಗೂ ಹೆಚ್ಚು ಕಾಲ ನಡೆಯುತ್ತದೆ. ಎತ್ತುಗಳನ್ನು ಹಸುಗಳನ್ನು ಕೊಳ್ಳುವವರು ಮಾರಾಟ ಮಾಡುವವರು ಹೆಚ್ಚಿನ ಸಂಖ್ಯೆಯಲ್ಲಿ ಬಂದು ವ್ಯಾಪಾರ ಮಾಡುತ್ತಾರೆ.

ಜಾತ್ರೆಗಳಲ್ಲಿ ರಥ ಪಶ್ಚಿಮ ದಿಕ್ಕಿನಿಂದ ಪೂರ್ವ ದಿಕ್ಕಿನ ಕಡೆ ಬಂದರೆ ಶುಭವೆಂದು ದಕ್ಷಿಣ ದಿಕ್ಕಿನ ಕಡೆ ಬಂದರೆ ಅಶುಭವೆಂದು ಜನರು ಭಾವಿಸುತ್ತಾರೆ.[೭] ಆ ದೇವರ ಪೂಜಾರಿಗಳು ವರ್ಷದ ಮಳೆ ಬೆಳೆ ಭವಿಷ್ಯವನ್ನು ಜನ ದನಗಳ ಸುಖದ ವಿಚಾರಗಳನ್ನು ಮೂರು ಡೊಳ್ಳಿನ ಮೇಲೆ ನಿಂತು ಹಕಾರಿ ಹೊಡೆದು ಒಂದೇ ಒಂದು ಮಾತಿನ ಹೇಳಿಕೆಯಿಂದ ಹೇಳುವರು.

ಗೊಡಬನಹಾಳ್, ದೇವರಪುರದಹಟ್ಟಿ, ಕಲ್ಲೇದೇವರಪುರ, ಹಿರೆಗುಂಟನೂರು, ನುಂಕೆಮಲೆಯಲ್ಲಿ ಪ್ರತಿ ವರ್ಷ ನಡೆಯುವ ಪ್ರಸಿದ್ಧಿ ರಥೋತ್ಸವ ಆಕರ್ಷಣೀಯವಾಗಿದೆ. ಜಾತ್ರೆಯಲ್ಲಿ ನೆಡೆಯುವ ಪ್ರತಿ ಕಾರ್ಯಗಳಲ್ಲಿ ಧಾರ್ಮಿಕ ಸ್ವರೂಪವಿರುವುದರಿಂದ ಜನರೆಲ್ಲಾ ಬಾವುಕರಾಗಿ ಶ್ರಾದ್ದಾಳುಗಳಾಗಿ ಆಚರಿಸುತ್ತಾರೆ. ಜಾತ್ರೆಯನ್ನು ಇಡೀ ಜನ ಸೇರಿ ಆಚರಿಸುವುದರಿಂದ ಇಲ್ಲಿ ನಾವು ಸಹಬಾಳ್ವೆ ಸಹಜೀವನ ಕಾಣುತ್ತೆವೆ. ಇಡೀ ಊರಿನ ಜನರಲ್ಲಾ ಭಾವೈಕ್ಯ ಬಂಧುತ್ವವನ್ನು ಹುಟ್ಟಿಸುತ್ತದೆ.

ಜಾತ್ರೆಗಳು ಕುಟುಂಬ ಭಾವನೆಯನ್ನು ತಂದು ಕೊಡುತ್ತವೆ. ಎಲ್ಲರೂ ಒಂದೇ ಮನೆತನದವರು ಎಂಬ ಭಾವನೆ ತರುತ್ತದೆ. ದೇವರ ಪಲ್ಲಕ್ಕಿ ಹೊರುವಾಗ, ರಥ ಎಳೆಯುವಾಗ, ಪೂಜೆ ಮಾಡುವಾಗ ಎಲ್ಲಾರೂ ಸೇರಿ ಆಚರಿಸುವಂತೆ ಒಬ್ಬರಿಗೊಬ್ಬರು ಸಹಕಾರ ನೀಡುವಂತೆ ಮುಂದಿನ ದಿನಗಳು

ಹೀಗೆ ಇರಬೇಕೆಂಬ ಪ್ರೇರಣೆಯನ್ನು ಜಾತ್ರೆಗಳು ನೀಡುತ್ತವೆ. ಜಾತ್ರೆಗಳಲ್ಲಿ, ಮಠಗಳಲ್ಲಿ, ಗಂಗಾ ಪೂಜೆ ಮುಂತಾದ ಆಚರಣೆಗಳಲ್ಲಿ ಎಲ್ಲಾ ಸಮುದಾಯದ ಜನರು ಸಕ್ರೀಯವಾಗಿ ಭಾಗವಹಿಸುತ್ತಾರೆ. ಇಲ್ಲಿ ತಮ್ಮದು ಎಂಬ ಭಾವನೆ ಇಲ್ಲದೆ ಜಾತ್ಯಾತೀತವಾಗಿ ಭಾಗವಹಿಸುತ್ತಾರೆ.[೭]

ಬೇಟೆ, ಕೃಷಿ, ಪಶುಪಾಲನೆ, ವ್ಯವಸ್ಥೆಯಲ್ಲಿ ಜೋಕುಮಾರ ಸ್ವಾಮಿಯ ಆಚರಣೆ ಹೆಚ್ಚಾಗಿ ಈ ಪರಿಸರದಲ್ಲಿ ಕಂಡುಬರುತ್ತದೆ.[೮] ಪ್ರತಿವರ್ಷ ಆರೇಳು ಮಂದಿ ಮುತ್ತೈದೆಯರು ಸೇರಿ ಒಬ್ಬರಿಗೆ ಜೋಕುಮಾರಸ್ವಾಮಿಯ ದೇವರ ಪುಟ್ಟಿಯನ್ನು ಹೊರಿಸಿಕೊಂಡು ಉಳಿದವರು ಪುಟ್ಟಿ ಚೀಲಗಳನ್ನು ಹಿಡಿದು ನೆಡೆಯುವರು. ಊರಾಡುವ ಹಕ್ಕು ಹಿಂದಿನಿಂದಲೂ ಬಂದಿದೆ. ಜೋಕುಮಾರಸ್ವಾಮಿಯನ್ನು ಹೊತ್ತು ತಂದ ಮಹಿಳೆಯರು ಕೇರಿ–ಕೇರಿಗಳಲ್ಲಿ ತಿರುಗುತ್ತಾ ಸಾಮೂಹಿಕವಾಗಿ ಹಾಡು ಹೇಳುತ್ತಾರೆ. ಮಹಿಳೆಯರು ತಮ್ಮ ತಮ್ಮ ಭಕ್ತಿಯಂತೆ ಇಂತಿಷ್ಟು ದಾನ ಮಾಡುವುದು ಸಹಜ. ಪುರುಷ ದೇವರಾದ ಜೋಕುಮಾರನಿಗೆ ಸ್ತ್ರೀಯರೇ ಪೂಜಾರಿಗಳು.

ಜೋಕುಮಾರಸ್ವಾಮಿ ಗ್ರಾಮೀಣ ಜನರಲ್ಲಿ ಅಪಾರ ಭಕ್ತಿಗೆ ಪಾತ್ರನಾಗಿದ್ದಾನೆ. ಈ ಜೋಕುಮಾರ ವರುಣನನ್ನು ಆರಾಧಿಸುವ ಕ್ರಮ ಸಂಸ್ಕೃತಿಗಳ ದಿಟ್ಟ ನಿಲುವು ಎನ್ನಬಹುದು. "ಜೋಕುಮಾರ ಹುಟ್ಟಿದರೆ ಕೇಡು ಎಂದು ಇವನು ಸತ್ತರೆ ಒಳ್ಳೆಯದು"[೯] ಮಳೆ ಸುಖ ಸಮೃದ್ಧಿ ಲಭಿಸುತ್ತದೆಂಬ ನಂಬಿಕೆಯಿದೆ. ಹೀಗಾಗಿ ಇವನಿಗೆ ಕೋರೆಮೀಸೆ, ಎಣ್ಣೆ,ಅಲಂಕಾರ ಮಾಡಿ ಕುಂಕುಮ, ಹೂವು ಮುಡಿಸಿ ನಾನಾ ಬಗೆಯಲ್ಲಿ ಸಂತೃಪಿಗೊಳಿಸುತ್ತಾರೆ. ಬೆನಕನು ಸತ್ತರೆ ಒಳ್ಳಯದು, ಬೆನಕ ಅಮವಾಸ್ಯೆ ದುರದೃಷ್ಟದ್ದು. ಕೇಡನ್ನು ತರುತ್ತದೆಂಬ ನಂಬಿಕೆಯಿಂದ ಜೋಕುಮಾರನನ್ನು ಆಚರಣೆ ಮಾಡುವರು. ಪ್ರಕೃತಿ ಆರಾಧನೆಯಲ್ಲಿ ಹೊಲದ ಪೈರನ್ನು ಪೂಜಿಸಿ ತೀರ್ಥ ಚೆಲ್ಲುವುದುಂಟು. ಜೋಕುಮಾರನ ಪ್ರಸಾದದಿಂದಲೇ ಈ ಬಗ್ಗೆ ಏನೆಲ್ಲಾ ಸಂಗತಿಗಳು ಪ್ರಚಲಿತದಲ್ಲಿವೆ. ಅವುಗಳ ಪೈಕಿ ಜನಪದರಲ್ಲಿ ಹಾಡುಗಳು ಹೆಣೆದುಕೊಂಡಿವೆ.

ಬೇಟೆ,ಪಶುಪಾಲನೆ ಮತ್ತು ಕೃಷಿ ಸಮಾಜ ವ್ಯವಸ್ಥೆಯಲ್ಲಿ ಎಲ್ಲಾ ಸಮುದಾಯದವರು ಜೋಕುಮಾರಸ್ವಾಮಿಯನ್ನು ಆಚರಿಸುತ್ತಾರೆ. ತಮ್ಮ ಹೊಲ ಗದ್ದೆಗಳಲ್ಲಿ ಸರಿಯಾಗಿ ಫಸಲು ಸಿಗಲು ಮಡಿಕೆಗೆ ಸುಣ್ಣ ಬಳಿದು ಹೊಲದಲ್ಲಿರುವ ಬಂಡೆಗಳ ಮೇಲೆ ಜೋಕುಮಾರನ ಕುರುಹು ಚಿತ್ರಗಳನ್ನು ಬರೆಯುವ ಪದ್ದತಿಯನ್ನು ಕಾಣಬಹುದು.

### ಬನ್ನಿಹಬ್ಬ

ಚಿನ್ನಹಗರಿ ನದಿ ಪರಿಸರದಲ್ಲಿ ಬನ್ನಿಹಬ್ಬವನ್ನು ಸಾಕಷ್ಟು ಕ್ಷೇತ್ರಗಳಲ್ಲಿ ಆಚರಿಸಲಾಗುತ್ತದೆ. ಈ ಹಬ್ಬವನ್ನು ನವರಾತ್ರಿ, ಮಹಾನವಮಿ, ದಸರಾಹಬ್ಬ, ನಾಡಹಬ್ಬ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಗೊಡಬನಹಾಳ್, ಕಲ್ಲೇದೇವರಪುರ, ಪೂಜಾರಹಳ್ಳಿ, ದೇವಸಮುದ್ರ ಮುಂತಾದ

ಕ್ಷೇತ್ರಗಳಲ್ಲಿ  ಬನ್ನಿ ಹಬ್ಬ ವಿಶೇಷವಾಗಿ ನಡೆಯುತ್ತದೆ. ಬನ್ನಿಮರಕ್ಕೆ ಪೂಜೆ ಸಲ್ಲಿಸಿ ಬನ್ನಿ ಮುಟ್ಟಿಸುವ ಕಾರ್ಯ ನಡೆಯುತ್ತದೆ. ವಿಜಯದಶಮಿಯ ರಾತ್ರಿ ಸುಮಾರು ೧೦ ಗಂಟೆಗೆ ಗುಡಿಯಿಂದ ಹೊರಟು ಊರಿನ ಕೇರಿಗಳ ಮೂಲಕ ಊರ ಹೊರಗೆ ಪೂರ್ವ ದಿಕ್ಕಿಗಿರುವ ಬನ್ನಿ ಮರದ ಬಳಿ ಹೋಗುತ್ತಾರೆ. ಅಲ್ಲಿ ಸುಮಾರು ಹತ್ತು ಸಾವಿರಕ್ಕೂ ಹೆಚ್ಚು ಮಂದಿ ಭಾಗವಹಿಸುತ್ತಾರೆ. ಕುಳಿತುಕೊಳ್ಳಲು ಜಾಗವಿರುವುದಿಲ್ಲ ಹೀಗೆ ಮೂರು ಗಂಟೆ ಕಾಲ ಕಳೆಯುವುದು. ಈ ಕಾರ್ಯಕ್ರಮಗಳಿಂದ ಗೊತ್ತಾಗುವುದಿಲ್ಲ. ಪೂಜಾಕಾರ್ಯಗಳು ಭಕ್ತರಿಂದ ಹೂವು, ಹಣ್ಣು, ಕಾಯಿ ಕೊಡುವುದರ ಮೂಲಕ ನಡೆಯುತ್ತದೆ. ಇನ್ನು ಕೆಲವರು ಮರುದಿನ ಕೊಡುತ್ತಾರೆ. ದೂರದ ಊರುಗಳಿಂದ ಬಂದವರು ಕಾಣಿಕೆ ಹಾಕಿ ಬನ್ನಿ ಮುಡಿದು ಪೂಜಾ ಸೇವೆ ಮುಗಿಸುತ್ತಾರೆ.

ಈ ಹಬ್ಬದಲ್ಲಿ ಜನಪದ ವಾದ್ಯಗಳಾದ ಉರುಮೆ, ನಂದಿಕೋಲು, ನಗಾರಿ, ತಮಟೆ ಮುಂತಾದವುಗಳನ್ನು ಕಳಸ, ಪಂಜು ಅಲಂಕೃತ ವಾದ ಛತ್ರಿ ಚಾಮರಗಳನ್ನು ಬಳಸಲಾಗುತ್ತದೆ. ಭಕ್ತರ ಸೇವೆಯಲ್ಲಿ ಭಜನೆ ಮತ್ತು ಕೋಲಾಟವನ್ನು ಮರೆಯುವಂತಿಲ್ಲ. ವಿವಿಧ ಗ್ರಾಮಗಳಿಂದ ಭಕ್ತರು ಬಂದು ಕೋಲಾಟ ಮತ್ತು ಭಜನೆಗಳು ಬೆರಗುಗೊಳಿಸುವಂಥಾದ್ದಾಗಿದೆ. ಪ್ರತಿಯೊಬ್ಬರೂ ಭಾಗವಹಿಸಿ ಐಕ್ಯತೆಯನ್ನು ಕಾಪಾಡಿಕೊಳ್ಳುತ್ತಾರೆ.

ಯುವಕರು ನಂದಿಕೋಲುಗಳನ್ನು ಹಾಕಿಕೊಂಡು ಕುಣಿಸುತ್ತಾರೆ. ಎಷ್ಟೇ ತೂಕವಿದ್ದರೂ ಉತ್ಸಾಹದಿಂದ ಶಕ್ತಿ ಮೀರಿ ಕುಣಿಸಿ ಜನರನ್ನು ರಂಜಿಸುತ್ತಾರೆ. ಕುರಿಹಟ್ಟಿಯ ಮೇಳ ಉರುಮೆ ಬಂದರೆ, ಗ್ರಾಮದ ಮಡಿವಾಳ ಮಡಿ ಹಾಸುವುದು, ಪಂಜು ಹಿಡಿಯುವ ಕೆಲಸ ಮಾಡುತ್ತಾರೆ. ಬೆಳಕು,ಲೈಟು,ಪಂಜು  ಇತ್ಯಾದಿ ವ್ಯವಸ್ಥೆಯನ್ನು ಗ್ರಾಮದ ಹರಿಜನರು ಮಾಡುತ್ತಾರೆ. ಹೀಗೆ ಮಹಾನವಮಿಯಲ್ಲಿ ಸಂಬಂಧಿಗಳ ಕೂಡುವಿಕೆ, ಗೂಳಿ ಪೂಜೆ, ಪಟಹಾರಗಳ ಹರಾಜು, ದೇವರು ಮೈ ತುಂಬುವುದು, ಪೂಜಾರಿಗಳು ಸಸ್ಯಹಾರಿ ಭೋಜನ ಉಪವಾಸ ಮುಂತಾದ ಕಾರ್ಯಗಳು ಜರುಗುತ್ತವೆ.  ಬನ್ನಿಯಮ್ಮ,ಬನ್ನಿಕಾಳಮ್ಮ,ಬನ್ನಿಮಕಾಳಿ,ಬನ್ನಿಮಹ್ಕಾಕಾಳಿ  ದೇವಾಲಯಗಳು ದೇವಪುರದಹಟ್ಟಿ ಹಾಗೂ ಇತರ ಸ್ಥಳಗಳಲ್ಲಿ ನೆಲೆಗೊಂಡು ಬನ್ನಿಮರದ ಕಟ್ಟೆಗಳಿರುವುದನ್ನು ಗುರುತಿಸಬಹುದು. ಹಲವಡೆ ಬನ್ನಿಮರಕ್ಕೆ ಬಳೆ ತೊಡಸಿ ಹೊಸ ಸೀರೆ ಉಡಿಸುವ ಸಂಪ್ರದಾಯವಿದೆ.

ಕೃಷಿ ಸಂಬಂಧಿ ಹಬ್ಬವಾಗಿ ಈ ಪರಿಸರದಲ್ಲಿ ಕಾರಹುಣ್ಣಿಮೆ ಎಂಬ ಕಾರ್ಯಕ್ರಮ ನಡೆಯುತ್ತದೆ. ಇಲ್ಲಿ ಮನುಷ್ಯನಿಗೆ ಆಹಾರ ದೊರೆಯದ ಅನಾದಿ ಕಾಲದಲ್ಲಿ ಹಾಲಿನ ಅಮೃತವಿತ್ತು ಪೋಷಿಸುತ್ತಾ ಬಂದಿರುವ ಹಸು ಮತ್ತು ರೈತನೊಂದಿಗೆ ಹೊಲಗದ್ದೆಗಳಲ್ಲಿ ದಣಿವಿಲ್ಲದೆ ದುಡಿದು ಹಸನಾಗಿಸುವ ಎತ್ತುಗಳಿಗೆ ಕೃತಜ್ಞತೆಯನ್ನು ಸಲ್ಲಿಸಲು ಕಾರಹುಣ್ಣಿಮೆ ಆಚರಣೆ ಬಂದಿರಬೇಕು. ಹಬ್ಬದಲ್ಲಿ ಎತ್ತು ಗೋವುಗಳನ್ನು ಸಿಂಗರಿಸಿ ಕೊಡಿಗೆ ಬಣ್ಣ ಹಚ್ಚಿ ಪೂಜೆ ಮಾಡಿ ಸಾಯಂಕಾಲ

ಎತ್ತುಗಳನ್ನು ಓಡಿಸುವ ಪದ್ದತಿ. ಅತ್ಯಂತ ಮನೋರಂಜನೀಯ ವಾಗಿರುತ್ತದೆ. ಇಂಥ ಸಮಯದಲ್ಲಿ ಎಲ್ಲಾ ಮತದ ಬಾಂದವರು ನೆರೆದು ಸಹೋದರತೆಯ ಭಾವನೆಯನ್ನು ಮೂಡಿಸುತ್ತಾರೆ.

**ಹೋಳಿ ಹಬ್ಬ**

ಇದು ಭಾರತದಾದ್ಯಂತ ಪ್ರಚಲಿತದಲ್ಲಿರುವ ಹಬ್ಬವಾಗಿದೆ. ಇದರ ಬಗ್ಗೆ ಪುರಾಣದಲ್ಲಿಯೂ ಕೆಲವು ಕಥೆಗಳನ್ನು ಕಾಣಬಹುದು. ಈ ಹೋಳಿ ಕುಣಿತವೂ ಉತ್ತರ ಹಾಗೂ ದಕ್ಷಿಣ ಕರ್ನಾಟಕದಲ್ಲಿ ಜಾನಪದ ಕಲೆಯ ರೂಪವಾಗಿ ಒಂದು ಹೊಸ ಆಯಾಮವನ್ನು ಪಡೆದುಕೊಂಡಿತು.”[೧೦] ಹೋಳಿ ಕುಣಿತದ ಸಂಪ್ರದಾಯ ಆಚರಣಾತ್ಮಕ ಕಲೆಯಾಗಿದ್ದು, ಎಲ್ಲಾ ವರ್ಗದ ಜನರು ತಮ್ಮದು ಎಂಬ ಭಾವದಿಂದ ಪಾಲ್ಗೊಂಡು ಸಂತೋಷ ವ್ಯಕ್ತಪಡಿಸುತ್ತಾರೆ. ಮೂರರಿಂದ ಇಪ್ಪತ್ತು ದಿನಗಳವರಗೆ ಈ ಆಚರಣೆಯನ್ನು ಆಚರಿಸುತ್ತಾರೆ.

**ಕೋಲಾಟ**

ಹಲವು ಕಲೆಗಳಲ್ಲಿ ಕೋಲಾಟವು ತನ್ನದೆ ಆದ ವೈಶಿಷ್ಟವನ್ನು ಹೊಂದಿದೆ. ಮನೋರಂಜನೆ ಹಾಗೂ ಕೆಲವು ಆಚರಣೆಗಳ ಹಿನ್ನೇಲೆಯಲ್ಲಿ ಕೋಲಾಟವು ಪ್ರಮುಖವಾದದು. ಕೋಲಾಟಕ್ಕೆ ವೇಷಭೂಷಣ ಇದೇ ಎಂದು ನಿರ್ದಿಷ್ಟವಾಗಿ ಹೇಳುವಂತಿಲ್ಲ. ಅಂದರೆ ಬಯಲು ಸೀಮೆಯಲ್ಲಿ ಬಣ್ಣದ ಚಡ್ಡಿ ತಲೆಗೆ ಮತ್ತು ನಡುವಿನ ಬಣ್ಣದ ವಸ್ತ್ರ ಕಾಲಿಗೆ ಗೆಜ್ಜೆ ಉತ್ತರ ಕರ್ನಾಟಕದಲ್ಲಿದ್ದರೆ ಬಿಗಿದು ಕಟ್ಟದ ಕಚ್ಚೆ ಕಾಲಿಗೆ ಗೆಜ್ಜೆ, ತಲೆಗೆ ಟೋಪಿ ಇವಿಷ್ಟು ಇರುತ್ತವೆ.

ಕೋಲಾಟದಲ್ಲಿ ಹತ್ತಾರು ವಿಧಗಳಿವೆ ಹಾಗೆಯೇ ಅವುಗಳ ಹಾಡುಗಳು ಕೂಡಾ ನಾನಾ ರೀತಿಯಲ್ಲಿ ದೊರೆಯುತ್ತವೆ. ಪುರಾಣ,ಇತಿಹಾಸ, ದೈವ, ಸಾಮಾಜಿಕ ವಿಡಂಬನೆ, ಹೆಣ್ಣು ಗಂಡಿನ–ಪ್ರೇಮ, ಆಧ್ಯಾತ್ಮತತ್ವ ಮೊದಲ್ಗೊಂಡು ಇತ್ತೀಚಿಗಿನ ಕುಟುಂಬ ಕಲ್ಯಾಣ ಮತ್ತು ಸಾಕ್ಷರತೆಗೆ ಹಾಗೂ ಸರ್ಕಾರಿ ಯೋಜನೆಗಳಿಗೆ ಸಂಬಂಧಿಸಿದ ಹಲವಾರು ವಿವಿಧ ಹಾಡುಗಳು ಕೂಡ ನಮಗೆ ಕಾಣಸಿಗುತ್ತವೆ. ಸುಗ್ಗಿಯ ಮತ್ತು ಕಾಮನಹುಣ್ಣಿಮೆಗಳಲ್ಲಿ ಕೆಲವು ಆಚರಣೆಗಳು ಸಂದರ್ಭದಲ್ಲಿ ಮತ್ತು ಮನೋರಂಜನೆಗಾಗಿ ಕೋಲಾಟವನ್ನು ಆಡುತ್ತಾರೆ. ಕೋಲಾಟವನ್ನು ನೋಡಲು ಎಲ್ಲಾ ಸಮುದಾಯದವರು ನೆರೆದಿರುತ್ತಾರೆ.

**ಮಾರಿಹಬ್ಬ**

ಮಾರಿಹಬ್ಬದ ಆಚರಣೆಯು ಬ್ರಾಹ್ಮಣ ಕನ್ಯೆಯನ್ನು ಮೋಸದಿಂದ ಮದುವೆಯಾದನೆಂಬ ಕಾರಣಕ್ಕಾಗಿ ಮಾದಿಗ ಯುವಕನಿಗೆ ಕೊಟ್ಟ ಶಿಕ್ಷೆಯ ಆರಾಧನೆಯಾಗಿದೆ. ಕೋಣನ ರೂಪದಲ್ಲಿ ಅವನನ್ನು ಮಾರಿಗೆ ಬಲಿಕೊಡುವವರು ಬೇಡನಾಯಕರಾಗಿದ್ದಾರೆ. ಮೂಲದಲ್ಲಿ ಸಮುದಾಯಗಳು ಸಹೋದರ ಸಂಬಂಧ ಹೊಂದಿದ್ದರ ಬಗ್ಗೆ ಕೆಲವು ಸುಳಿವುಗಳು ದೊರೆಯುತ್ತವೆ. ಬೇಡನಾಯಕರು

ತಳವಾರರಾಗಿ ಆಡಳಿತ ವಲಯದಲ್ಲಿ ಕರ್ತವ್ಯ ನಿರ್ವಹಿಸುವಾಗ ಇಂಥ ಕೆಲಸಗಳನ್ನು ಮಾಡಲೇಬೇಕಾಗಿರುತ್ತದೆ. ಇಂಥ ಸಂದರ್ಭದಲ್ಲಿ ಕೋಣನ ತಲೆಯನ್ನು ಒಂದೇ ಕಚ್ಚಿಗೆ ಕಡಿಯುಪ್ಪರಲ್ಲಿ ನೆಣದ ಪೂರೆಯನ್ನು ಕತ್ತು ಕೋಣದ ಮುಂಗಾಲನ್ನು ಕತ್ತರಿಸಿಕೊಳ್ಳುತ್ತಾರೆ. ಜೀವ ಬಿಡುವಾಗ ತೆರೆದ ಕೋಣದ ಬಾಯಿಗೆ ಕತ್ತರಿಸಿದ ಮುಂಗಾಲನ್ನಿಟ್ಟು ತಕ್ಷಣವೇ ಕೋಣನ ತಲೆಯ ಮೇಲೆ ದೀಪ ಹಚ್ಚುತ್ತಾರೆ ಬಲಿ ಕೊಡುವಲ್ಲಿನ ವಿಶಿಷ್ಟ ಕಲೆ ಇದು.

ಕೋಣನ ಬಲಿಯಾದ ತಕ್ಷಣ ಉರುಮೆ ತಮಟೆಯ ಕುಣಿತದೊಂದಿಗೆ ಕೋಣ ಕಡಿದವನನ್ನು ಹೊತ್ತು ಮೆರವಣಿಗೆ ಮಾಡುತ್ತಾರೆ. ಈ ಸಮಯದಲ್ಲಿ ತಮಟೆ ಬಾರಿಸುತ್ತಾ ಏಕ ಕಾಲಕ್ಕೆ ಕುಣಿತದ ಹೆಜ್ಜೆ ಲಯಗಳನ್ನು ಹಾಕುತ್ತಾರೆ. ಈ ಸಂದರ್ಭಗಳಲ್ಲಿ ಎರಡು ಸಮುದಾಯಗಳು ಮಾತ್ರ ಆಚರಣೆಯನ್ನು ಕರ್ತವ್ಯವಾಗಿ ನಿರ್ವಹಿಸುತ್ತಾರೆ. ಉಳಿದಂತೆ ಊರೊಟ್ಟಿನ ಎಲ್ಲಾ ಸಮುದಾಯಗಳು ಪಾಲ್ಗೊಳ್ಳುತ್ತಾರೆ. ಯಾವುದೇ ಗ್ರಾಮದ ಶಾಂತಿ ಸುಭಿಕ್ಷತೆಯ ಸಂಕೇತವಾಗಿ 'ಚೆರಗ' ಚೆಲ್ಲುವ ಪದ್ಧತಿ, ಹುಲಸಿನ ಕಾಳು ಗ್ರಾಮದ ದೇವರ ಪೂಜಾರಿಗಳು ಹಬ್ಬದಂದು ಕೊಡುತ್ತಾರೆ. ಅವುಗಳನ್ನು ತೆಗೆದುಕೊಂಡು ಹೋಗಿ ಬಿತ್ತನೆಬೀಜಗಳಲ್ಲಿ ಸೇರಿಸಿ ಬಿತ್ತಿದರೆ ಫಸಲು ಚೆನ್ನಾಗಿರುತ್ತದೆ ಹಾಗೂ ಅಭಿವೃದ್ಧಿಗಾಗಿ ಬೆಳೆ ಚೆನ್ನಾಗಿರಲು ಇಂತಹ ಆಚರಣೆಗಳು ಜರಗುತ್ತವೆ. ನ್ಯಾಯ ಪಂಚಾಯ್ತಿ ವ್ಯವಸ್ಥೆ, ಹಿರಿಯರಿಗೆ ಅವರ ಅನುಭವಕ್ಕೆ ಗೌರವ ಸೂಚಿಸುವ, ವೃತ್ತಿ ಆಧಾರಿತ ಕಸುಬುಗಳು ಗೌಡ, ಕುಂಬಾರ, ಕಮ್ಮಾರ, ಹಡಪದ, ಚೆಮ್ಮಾರ, ಅಗಸ, ಚಲವಾದಿ, ಮಾದಿಗ ಇವರೆಲ್ಲ ಮಧ್ಯ ಪ್ರತಿನಿತ್ಯದ ಕಾರ್ಯಗಳಲ್ಲದೆ ಸಾಂಸ್ಕೃತಿಕ ಬಾಂಧವ್ಯದ ದೃಷ್ಟಿಕೋನದಿಂದ ಜಾತ್ರೆಗಳು ಏರ್ಪಟ್ಟು ಇಡೀ ವರ್ಷದ ಪರಿಸರದ ಬದುಕು ಸುವ್ಯವಸ್ಥಿತವಾಗಿ ನಡೆಯುತ್ತಿರುವುದನ್ನು ಅವಲೋಕಿಸಬಹುದು.

ಈ ಪರಿಸರದ ಕೆಲವು ಭಾಗಗಳಲ್ಲಿ ಕರಿಬೇವಿನ ಸೊಪ್ಪಿನ ವೇಷ ಆಚರಣೆಯೂ ಕಂಡುಬರುತ್ತದೆ. ಇದು ಮನೋರಂಜಕವಾದುದಾಗಿದೆ. ಇದು ಸಂಜೆಯಲ್ಲಿ ಪ್ರದರ್ಶಿಸುವ ಕಲೆಯಾಗಿದ್ದು, ಪ್ರೇಕ್ಷಕರನ್ನು ಮನಃಸಂತೋಷಪಡಿಸುವಂತಹುದಾಗಿದೆ. ಇದರಲ್ಲಿ ಜಾತಿಯ ಬೇದಭಾವವಿಲ್ಲದೆ ಎಲ್ಲರೂ ಭಾಗವಹಿಸುವ ಕಲೆಯಾಗಿದೆ. ಈ ಕಲೆಯು ವೈಶಿಷ್ಟತೆ ಎಂದರೆ ಕರಿಬೇವಿನ ಸೊಪ್ಪನ್ನು ಕೈಯಲ್ಲಿ ಹಿಡಿದುಕೊಂಡು ಮೈಮೇಲೆಲ್ಲಾ ಹಾಕಿಕೊಂಡು ಕತ್ತೆಯ ಮೇಲೆ ಕೂತು ಪ್ರದರ್ಶಿಸುವ ಕಲೆಯಾಗಿದೆ.

**ಮೊಹರಂ**

ಮುಸಲ್ಮಾನರ ಕಾಲದ ಕಲ್ಪನೆಯಲ್ಲಿ ಮೊಹರಂ ಮೊದಲ ತಿಂಗಳಿನ ಹೆಸರು ಈ ತಿಂಗಳಲ್ಲಿ ನಡೆಯುವ ಹಬ್ಬವಾದುದರಿಂದ ಇದಕ್ಕೆ ಮೊಹರಂಹಬ್ಬ ಎಂದು ಹೆಸರು ಬಂದಂತೆ ಹೇಳಲಾಗಿದೆ.

ಇದರ ಜೊತೆಗೆ ಈ ಹಬ್ಬಕ್ಕೆ "ಅಲಾದಿಹಬ್ಬ, ಪೀರ್ಲಹಬ್ಬ ರಮಾಲಪ್ಪನಹಬ್ಬ, ಅಲ್ಲಾಸಾಬ, ಅಲಾಯಪ್ಪ, ಬಾಬಯ್ಯನಹಬ್ಬ ಹಾಗೂ ಪಕ್ಕಿರಸ್ವಾಮಿಹಬ್ಬ ಎಂಬಿತ್ಯಾದಿ ಹೆಸರುಗಳೂ ಈ ಪರಿಸರದಲ್ಲಿ ಪ್ರಚಲಿತದಲ್ಲಿವೆ".[೧೧]

ಈ ಮೊಹರಂ ದೇವರ ಆಚರಣೆಯಲ್ಲಿ ದಲಿತರು, ಬೇಡರು, ಅಗಸರು, ಆಯಗಾರರು ಹೆಚ್ಚು ಸಕ್ರೀಯವಾಗಿ ಭಾಗವಹಿಸುತ್ತಾರೆ."[೧೨] ಇವರೆಲ್ಲ ಹುಲಿವೇಷ ಧರಿಸಿ ಮನೆ ಮನೆ ತಿರುಗಿ ಹಣ,ದವಸ ಧಾನ್ಯಗಳನ್ನು ಸಂಗ್ರಹಿಸುತ್ತಾರೆ. ಪೀರ್ಲದೇವರಿಗೆ ಹರಕೆ ಒಪ್ಪಸುವರು ತಮಟೆ ಬಡಿಯುತ್ತ ಹುಸೇನರ ಸ್ಮರಣೆ ಮಾಡುತ್ತಾರೆ. ಹೊಳೆ ಬದಿಯಲ್ಲಿ ಮಾಡುವ ಆಚರಣೆಗಳಲ್ಲಿ ಸಕ್ರೀಯವಾಗಿ ಭಾಗಹಿಸುತ್ತಾರೆ. ದೇವರು ನೀರಿಗೆ ಬೀಳುವ ಕೊನೆ ದಿನದ ಆಚರಣೆಯನ್ನು ನದಿ ಪ್ರದೇಶ ಪ್ರಮುಖವಾಗಿದೆ. ಹೀಗಾಗಿ ಚಿನ್ನಹಗರಿ ನದಿ ಪರಿಸರ ಹಿಂದೂ ಮುಸ್ಲಿಂ ಭಾವೈಕ್ಯತೆಯನ್ನು ಸೊಗಸಾಗಿ ಪ್ರತಿನಿಧಿಸುತ್ತದೆ.

ಒಟ್ಟಿನಲ್ಲಿ ವರ್ಷವೆಲ್ಲ ಹರ್ಷದಾಯಕವಾಗಲಿ ಬಾಳಿನಲ್ಲಿ ಸಿಹಿಯೊಂದಿಗೆ ಕಹಿಯನ್ನು ಸಹಿಸುವ ಶಕ್ತಿ ಬರಲಿ ಎಂಬ ಸಂದೇಶ ಸಾರುವ ಯುಗಾದಿ, ನಮ್ಮ ಹೊಟ್ಟೆ ತುಂಬಲು ಬಾಳು ಬೆಳೆಗಲು ಕಾರಣನಾದ ದಿವಸ ಧಾನ್ಯಗಳ ಸಂಪತ್ತು ವೃದ್ಧಿಗಾಗಿ ಲಕ್ಷ್ಮೀಪೂಜೆ (ದೀಪಾವಳಿ) ದುಷ್ಟರಾಕ್ಷಸಿ ಶಕ್ತಿಗಳು ನಮಗೆ ತೊಂದರೆ ಕೊಡದಿರಲಿ ದಿವ್ಯ ದೈವೀಶಕ್ತಿ ನಮ್ಮಲ್ಲಿ ತುಂಬಿ ಬರಲಿ ಎಂಬ ಭಾವನೆಯಿಂದ ಶಕ್ತಿ ಪೂಜೆ ನಮ್ಮ ಕೆಲಸಕ್ಕೆ ಏನು ತೊಂದರೆ ಬರದಿರಲೆಂದು ಉದ್ದೇಶದಿಂದ ವಿಘ್ನ ನಿವಾರಕನಾದ ಗಣಪತಿ ಪೂಜೆ ನಮಗೆ ಭಯ ಹುಟ್ಟಿಸುವ ಪ್ರಾಣಿಗಳಿಂದ ರಕ್ಷಣೆಕೋರಿ ವಿಷ ಜಂತುಗಳ ಭಾದೆ ನಮಗೆ ತಟ್ಟದಿರಲಿ ಎಂಬ ಉದ್ದೇಶದಿಂದ ನಾಗರಪೂಜೆ ಮಳೆ-ಬೆಳೆ, ರೋಗರುಜಿನ, ಕತ್ತಲೆ ಬೆಳಕು, ಪ್ರಕೃತಿಯ ಚೆಲ್ಲಾಟಗಳಿಗೆಲ್ಲಾ ಸೂರ್ಯನೇ ಕಾರಣ ವಿಶ್ವಕ್ಕೆಲ್ಲಾ ಬೆಳಕು ನೀಡಿ ಉಪಕರಿಸುವ ಸೂರ್ಯನಿಗೆ ಕೃತಜ್ಞತಾ ಸೂಚಿಯಾಗಿ ಸಂಕ್ರಾಂತಿ. ಪ್ರಕೃತಿದತ್ತವಾದ ಹಗಲು, ರಾತ್ರಿ, ಗಾಳಿ ಮಳೆಯನ್ನು ತನ್ನ ನಿಯಂತ್ರಣದಲ್ಲಿಟ್ಟುಕೊಂಡು ತಪ್ಪದೇ ಇಳಿಗೆ ಹರಿಸುವ ಪ್ರಪಂಚದ ತಂದೆ ಎನಿಸಿರುವ ಶಿವನಿಗೆ ಸಲ್ಲಿಸುವ ಮಂಗಳಮಯವಾಗಲಿ ಎಂಬ ಶಿವರಾತ್ರಿ ಪೂಜೆ ಇನ್ನು ಮುಂತಾದ ಆಚರಣೆಗಳನ್ನು ಈ ಪರಿಸರದಲ್ಲಿ ಆಚರಿಸುತ್ತಾರೆ. ಇಂಥ ಸಂದರ್ಭಗಳಲ್ಲಿ ಎಲ್ಲಾ ಮತದ ಬಾಂಧವರು ಸೇರಿ ವಿವಿಧತೆಯಲ್ಲಿ ಏಕತೆಯನ್ನು ಸಾರುತ್ತಾರೆ.

**ಅಡಿಟಿಪ್ಪಣಿಗಳು**

೧. ವಿರೂಪಾಕ್ಷಿ ಪೂಜಾರಹಳ್ಳಿ :"ಅಕ್ಕಮ್ಮನ ಆಚರಣೆ" ಪ್ರಸಾರಾಂಗ, ೨೦೦೨, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ ೧

೨. ಅದೇ, ಪುಟ ೨

೩. ಅದೇ, ಪುಟ ೧೫

೪. ಅದೇ,ಪುಟ ೧೫

೫. ಸ.ಚಿ.ರಮೇಶ್ : 'ನೀರು',೨೦೦೪, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ಪುಟ ೫

೬. ಸಿದ್ದನಗೌಡ : 'ತುಂಗಭದ್ರಾ ನದಿಪರಿಸರದ ಧಾರ್ಮಿಕ ಕ್ಷೇತ್ರಗಳು', ೨೦೦೬, ಎಂ.ಫಿಲ್ ಅಪ್ರಕಟಿತ ನಿಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ. ಪುಟ ೧೦೦

೭. ಅದೇ,ಪುಟ ೯೮

೮. ವಿರೂಪಾಕ್ಷಿ ಪೂಜಾರಹಳ್ಳಿ : 'ಚಿನ್ನಹಗರಿಸಿರಿ' ಚಿನ್ನಹಗರಿಪ್ರಕಾಶನ ಕೆ.ಬಿ.ಹಟ್ಟಿ ಪೂಜಾರಹಳ್ಳಿ ಬಳ್ಳಾರಿ (ಜಿ) ಪು ೧೬೭

೯. ಅದೇ, ಪುಟ ೯೮

೧೦. ಮಂಜುನಾಥ ಬೇವಿನಕಟ್ಟೆ : 'ಅದಿವಾಸಿ', ಸಾಹಿತ್ಯ ನಂದನ ನಂ ೯ ೪ನೇ ಇ ಬ್ಲಾಕ್, ಪುಟ ೧೨೬ ಬೆಂಗಳೂರು.

೧೧. ಸಿದ್ದನಗೌಡ: 'ತುಂಗಭದ್ರಾ ನದಿಪರಿಸರದ ಧಾರ್ಮಿಕ ಕ್ಷೇತ್ರಗಳು'೨೦೦೬, ಎಂ.ಫಿಲ್ ಅಪ್ರಕಟಿತ ನಿಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ. ಪುಟ ೯೯

೧೨. ಮಂಜುನಾಥ ಬೇವಿನಕಟ್ಟೆ : 'ಅದಿವಾಸಿ' ಸಾಹಿತ್ಯ ನಂದನ ನಂ ೯ ೪ನೇ ಇ ಬ್ಲಾಕ್, ಪುಟ ೧೨೫ ಬೆಂಗಳೂರು.

## ಅಧ್ಯಾಯ : ಎಂಟು

# ಸಮಾರೋಪ

ಚಿನ್ನಹಗರಿ ನದಿ ಚಾರಿತ್ರಿಕವಾಗಿ ಮಹತ್ವ ಪಡೆದ ನದಿಯಾಗಿದೆ. ರಾಜಪ್ರಭುತ್ವಗಳ ಆಳ್ವಿಕೆಯಲ್ಲಿ ಭೌಗೋಳಿಕ ಗಡಿಯಾಗಿ ಮಹಿಳೆಯರಿಗೆ ಆರಾಧನಾ ನೆಲೆಯಾಗಿಯೂ ಇತ್ತು. ತಿಪ್ಪೇಹಳ್ಳಿ ಕರಿಕಲ್ಲುಗಂಗಮ್ಮ ಹಾಗೂ ಮಧ್ಯ ಮರದ ಗಂಗಮ್ಮ(ಕುಮತಿ) ನದಿಯ ಮಧ್ಯಭಾಗದಲ್ಲಿವೆ. ಹೆಣ್ಣು ಮಕ್ಕಳ ದೈಹಿಕ, ಮಾನಸಿಕ ಹಾಗೂ ವೈವಾಹಿಕ ಸಮಸ್ಯೆಗಳನ್ನು ಪರಿಹರಿಸುವ ಶಕ್ತಿಗಳಾಗಿ ಗಂಗೆಯನ್ನು ಪೂಜಿಸುತ್ತಾರೆ. ಗ್ರಾಮೀಣ ಪರಂಪರೆಯಲ್ಲಿ ಗಂಗೆಯ ಪೂಜೆಗೆ ಬಹಳ ಮಹತ್ವವಿದೆ. ದೈನಂದಿನ ಕಾರ್ಯಚಟುವಟಿಕೆಗಳಾದ ಕೃಷಿ, ಸಾಕು ಪ್ರಾಣಿಗಳು ಅಲ್ಲದೆ ತಮಗೆ ಪೂರಕವಾದ ಸಸ್ಯಸಂಪತ್ತು, ಮೃಗಸಂಪತ್ತು ಎಲ್ಲವೂ ನೀರನ್ನೇ ಅವಲಂಬಿಸುವುದು ವಾಸ್ತವಾಂಶ. ಇದು ಕೃಷಿ ನೀರಾವರಿಗೆ ಯೋಗ್ಯವಾದ ನದಿಯಾಗಿದೆ. ಹಾಗೆಯೇ ಮರಳು ಅಪು,ಮೀನು, ಇಟ್ಟಿಗೆ, ಇದ್ದಿಲು ಇನ್ನು ಮುಂತಾದ ನದಿಯ ಸಂಪತ್ತನ್ನು ಮಾರಾಟ ಮಾಡುವ ಜನರಿದ್ದಾರೆ. ನದಿಯ ಇಕ್ಕಲಗಳಲ್ಲಿ ಪ್ರಾಚೀನ ಕಾಲದಿಂದಲೂ ಅರಸರು ನಿರ್ಮಿಸಿದ ದೇವಾಲಯಗಳು ಗುಡಿಗೋಪುರಗಳು, ಶಿಲ್ಪಮಂದಿರಗಳು ಇವೆ. ಕೃಷಿ ನೀರಾವರಿ ಉದ್ದಿಮೆ ಕುಡಿಯುವ ನೀರಿಗೆ ಚಿನ್ನಹಗರಿ ನದಿ ಹಿಂದಿನಿಂದಲೂ ಸಹಕಾರಿಯಾಗಿದೆ. ಹಾಗೆಯೇ ಧಾರ್ಮಿಕವಾಗಿ ವಿವಿಧ ಧರ್ಮ ಜನಸಮುದಾಯಗಳಿಗೆ ಆರಾಧನಾಕೇಂದ್ರ ಬಿಂದುವಾಗಿದೆ. ನದಿ ಪರಿಸರದಲ್ಲಿ ನಾಗರೀಕತೆ ಮತ್ತು ಸಂಸ್ಕೃತಿ ಬೆಳೆದು ಅನೇಕ ನಗರಗಳು ಜನ್ಮ ತಾಳಿದವು. ಇದು ಆಯಾಭಾಗದ ನದಿ ಬಯಲಿನ ಪ್ರದೇಶಗಳಿಗೆ ಸಾಮಾಜಿಕ ಮತ್ತು ಆರ್ಥಿಕ ಬೆಳವಣಿಗೆಗೆ ಕಾರಣವಾಯಿತು. ಈ ನೆಲೆಯಲ್ಲಿ ನದಿ ಪರಿಸರದ ಬಹುಭಾಗ ಸರ್ವತೋಮುಖ ಅಭಿವೃದ್ದಿಗೆ ಚಿನ್ನಹಗರಿ ನದಿಯು ವಿವಿಧ ರೀತಿಯಲ್ಲಿ ಸಹಕಾರಿಯಾಗಿದೆ.

ಚಿನ್ನಹಗರಿ ನದಿ  ಹುಟ್ಟು ಅದರ ಹರಿವು ಮತ್ತು ವಿಸ್ತಾರ ಹಾಗೂ ಚಾರಿತ್ರಿಕವಾಗಿ ವಿವಿಧ ಕಾಲಘಟ್ಟಗಳಲ್ಲಿ ಅದು ಸೃಷ್ಟಿಸಿದ ಚರಿತ್ರೆಯನ್ನು ಕಂಡುಕೊಳ್ಳಲು ಅಧ್ಯಯನದಿಂದ  ಸಾಧ್ಯವಾಗಿದೆ. ಚಿನ್ನಹಗರಿ ನದಿ ಪರಿಸರದ ಪುರಾತತ್ವ ಮತ್ತು ಚಾರಿತ್ರಿಕ ನೆಲೆಗಳ ಕುರಿತಾದ ಅಧ್ಯಯನ ಇದಾಗಿದೆ. ಉಗಮದಿಂದ ಅಂತ್ಯದವರೆಗೆ ಪ್ರಾಚೀನ ನೆಲೆಗಳು ಈ ಪರಿಸರದಲ್ಲಿ ಕಂಡು ಬರುತ್ತವೆ. ಈ ಪರಿಸರದಲ್ಲಿ ಅನ್ವೇಷಣೆ ಮತ್ತು ಉತ್ಖನನ ಸೂಕ್ಷ್ಮ ಶಿಲಾಯುಗದಿಂದ ಹಿಡಿದು ಆದಿ ಇತಿಹಾಸ ಕಾಲದವರೆಗೆ ಅವಶೇಷಗಳು ದೊರೆತಿವೆ. ಆದರೆ ಈವರೆಗೆ ಹಳೆಶಿಲಾಯುಗದ ನೆಲೆಗಳಿಗೆ ಹೋಲಿಸಿದರೆ ಬೃಹತ್ ಶಿಲಾಯುಗದ ನೆಲೆಗಳು ಅಧಿಕ ಸಂಖ್ಯೆಯಲ್ಲಿ ಕಂಡು ಬಂದಿವೆ. ಇದರಿಂದ ಸೂಕ್ಷ್ಮ ಶಿಲಾಯುಗ ಸಂಸ್ಕೃತಿಯಲ್ಲಿ ಜನಸಂಖ್ಯೆಯು ಹೆಚ್ಚಾಯಿತ್ತೆಂದು ತಿಳಿಯುತ್ತದೆ.

ಮಾನವನ ಸೃಷ್ಟಿಗಿಂತಲೂ ಪ್ರಕೃತಿಯ ಸೃಷ್ಟಿ ಅತ್ಯಂತ ಪ್ರಾಚೀನವಾದುದು. ಪ್ರಕೃತಿ ಹಾಗೂ ಮಾನವ ಸಂಬಂಧ ಅದ್ಭುತವೂ ಮತ್ತು ಸೋಜಿಗವೂ ಆಗಿದೆ. ಸೃಷ್ಟಿ, ಸ್ಥಿತಿ ಮತ್ತು ಲಯಗಳ ಮೂಲಕ ಪ್ರಕೃತಿಯು ಇಡೀ ಜೀವನದ ಮೇಲೆ ಸೂತ್ರಧಾರಿತ್ವ ವಹಿಸಿದೆ ಎಂದು ಹೇಳಲಾಗುವುದು. ಈ ಸೂತ್ರಧಾರಿತ್ವದಲ್ಲಿ ಪಾತ್ರದಾರಿಯಾದ ಮಾನವನು ಹಿಂದೆ ಅನಾದಿಕಾಲದಲ್ಲಿ ಭಯಭೀತನಾಗಿ ರಕ್ಷಣೆಯ ಮಾರ್ಗಕ್ಕಾಗಿ ತನ್ನ ಉಳಿವಿಗಾಗಿ ಹಾಗೂ ಶ್ರೆಯಸ್ಸಿಗಾಗಿ ಪ್ರಕೃತಿಯ ಮೊರೆ ಹೊಕ್ಕಿದ್ದನೆಂಬುದು ಸ್ಪಷ್ಟವಾಗುತ್ತದೆ. ಮಳೆ, ಬೆಳೆ, ಗಿಡ–ಮರಗಳು ನದಿ–ಸರೋವರಗಳು, ಆಕಾಶ, ಬೆಂಕಿ ಇವುಗಳು ಧೈವೀ ಸ್ವರೂಪವೆಂದೇ ಭಾವಿಸಿದ್ದನು. ಅವುಗಳಲ್ಲಿ ಅದೃಶ್ಯ ಶಕ್ತಿಗಳ ಕೈವಾಡವಿದೆಯೆಂದು ನಂಬಿದ ಮಾನವನು ಆ ದೈವೀ ಆರಾಧನೆಯಲ್ಲಿ ತೊಡಗಿದನೆಂದು ಹೇಳಬಹುದು. ಈ ನಂಬಿಕೆಗಳೇ ಆಚರಣೆ, ಸಂಪ್ರದಾಯ, ಗುಡಿ–ಗೋಪುರ, ದೇವಾಲಯಗಳು ನಿರ್ಮಾಣವಾಗಿರಬಹುದು. ಈ ಪರಿಸರದಲ್ಲಿ ಅನೇಕ ಧಾರ್ಮಿಕ ಕ್ಷೇತ್ರಗಳಲ್ಲಿ ವಿಭಿನ್ನ ರೀತಿಯ ಆಚರಣೆಗಳು ನಡೆಯಲ್ಪಡುತ್ತವೆ.

ಈ ಪರಿಸರದಲ್ಲಿ ದೇವಾಲಯಗಳನ್ನು ಗಮನಿಸುವುದರ ಜೊತೆಗೆ ಇಲ್ಲಿರುವ ಶಿಲ್ಪ, ಚಿತ್ರಕಲೆ ಇತರ ಪ್ರಕಾರಗಳನ್ನು ಗಮನಿಸಲಾಗಿದೆ. ಈ ದೇವಾಲಯಗಳು ಆಗಿನ ಕಾಲದಲ್ಲಿ ಧಾರ್ಮಿಕ ಕೇಂದ್ರಗಳಾಗಿ ಅಲ್ಲದೆ ಇತರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಸಂಗೀತ, ನೃತ್ಯಕಲಾ ಕೇಂದ್ರಗಳಾಗಿ ಕಾರ್ಯನಿರ್ವಹಿಸಿರುವುದು ಶಾಸನಗಳಿಂದ ತಿಳಿಯುತ್ತದೆ. ಪ್ರಸ್ತುತ ಅಧ್ಯಯನದ ಪ್ರದೇಶದಲ್ಲಿ ೭೫ ವೀರಗಲ್ಲುಗಳು ಹಾಗೂ ೨೦ ಮಾಸ್ತಿ ಕಲ್ಲುಗಳು ದೊರೆತಿದ್ದು, ಅವುಗಳು ಪ್ರಾದೇಶಿಕ,ಸ್ಥಳೀಯ ಚರಿತ್ರೆಗೆ ಆಕರಗಳಾಗಿವೆ. ಗಮನಿಸಲಾಗಿದೆ. ಈ ಎರಡು ಕುರುಹುಗಳು ಅಂದಿನ ಕಾಲದ ಜನಜೀವನದ ಮೇಲೆ ಬೆಳಕು ಚೆಲ್ಲುತ್ತವೆ. ವೀರಗಲ್ಲುಗಳು ಅಂದಿನ ರಾಜ್ಯ ವ್ಯವಸ್ಥೆಯಲ್ಲಿ ಯುವಕರು ಮಾಡಬೇಕಾದ ಮುಲಭೂತ ಕರ್ತವ್ಯಗಳನ್ನು ಪ್ರತಿಪಾದಿಸುತ್ತವೆ. ಅಲ್ಲದೆ ಮುಂದಿನ ಪೀಳಿಗೆಯ ಯುವಕರ ಪಾತ್ರವೆಂಬುವುದನ್ನು ಭೋದಿಸುತ್ತವೆ. ಮಾಸ್ತಿಕಲ್ಲುಗಳಿಂದ ಅಂದರೆ ಸಮಾಜದಲ್ಲಿದ್ದ ಸಾಮಾಜಿಕ ಪದ್ಧತಿ, ಸ್ತ್ರೀಯರ ಸ್ಥಾನಮಾನ ಮುಂತಾದ ಮೌಲ್ಯಗಳನ್ನು ಭೋದಿಸುತ್ತವೆ.

ಒಂದು ರಾಜ್ಯದ ಸಪ್ತಾಂಗಗಳಲ್ಲಿ ಕೋಟೆಯು ಒಂದಾಗಿದೆ. ಈ ಪರಿಸರದಲ್ಲಿ ಅನೇಕ ಕೋಟೆಗಳನ್ನು ಗಮನಿಸಲಾಗಿದೆ. ಈ ಪ್ರದೇಶದಲ್ಲಿ ಗಿರಿದುರ್ಗಗಳು ಅಧಿಕ ಸಂಖ್ಯೆಯಲ್ಲಿವೆ. ಇದಕ್ಕೆ ಅಲ್ಲಿನ ಬೆಟ್ಟಗುಡ್ಡಗಳಿಂದ ಆವೃತ್ತವಾದ ಭೌಗೋಳಿಕ ಸನ್ನಿವೇಶವು ಪ್ರಮುಖ ಕಾರಣವಾಗಿದೆ. ಆದರೆ ಇಲ್ಲಿರುವ ಲಂಕೆಕೋಟೆ, ಹನೆಯಕೋಟೆ ಹಾಗೂ ಮೊಳಕಾಲ್ಮುರು ಕೋಟೆಗಳ ನಿರ್ಮಾಣಗಳಿಗೆ ಮಾತ್ರ ಶಾಸನಾಧಾರಗಳಿವೆ. ಅಲ್ಲದೆ ಬಹುತೇಕ ಕೋಟೆಗಳಿಗೆ ಯಾವುದೇ ಐತಿಹಾಸಿಕ ಆಧಾರಗಳಿಲ್ಲ ಅಲ್ಲದೆ ಈ ಪ್ರದೇಶದಲ್ಲಿ ರಂಗಯ್ಯನದುರ್ಗದ ಕೋಟೆ, ಕೊತ್ತಲಗಳು ಅಧಿಕವಾಗಿವೆ. ಇವುಗಳು ಬೇಚಾರಕ್ ಗ್ರಾಮ ಹಾಗೂ ಪ್ರಸ್ತತ ಜನವಸತಿಗಳಿರುವ ಗ್ರಾಮಗಳಲ್ಲಿಯೂ

ಇವೆ. ಅಂದು ರಾಜ್ಯದ ಕೊನೆಯ ಘಟಕ ಗ್ರಾಮವಾಗಿದ್ದು, ರಕ್ಷಣೆಗೆ ಕೊತ್ತಲಗಳನ್ನು ಕಟ್ಟಿ ಅದರಿಂದ ವಿರೋಧಿಗಳ ಚಲನವಲನಗಳನ್ನು ಗಮನಿಸುತ್ತಿದ್ದರು. ಶಾಸನಗಳು ಅಂದಿನ ರಾಜಕೀಯ ಇತಿಹಾಸವಲ್ಲದೆ ಸಾಮಾಜಿಕ, ಅರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಇತಿಹಾಸ ಹಾಗೂ ಅಂದಿನ ಜನಸಾಮಾನ್ಯರ ಬದುಕನ್ನು ತಿಳಿಯಲು ಸಾಧ್ಯವಾಗುತ್ತದೆ.

ನದಿಯ ಬಹುಭಾಗ ಬುಡಕಟ್ಟು ಸಮುದಾಯಗಳು ಅವರಿಸಿಕೊಂಡಿವೆ. ಬೇಡ, ಲಂಬಾಣಿ, ಕೊರಮ, ಈಡಿಗ, ಬೆಸ್ತ, ಅಗಸ ಮುಂತಾದ ಪಂಗಡಗಳು ಇಲ್ಲಿ ನೆಲೆಗೊಂಡಿವೆ. ಬುಡಕಟ್ಟಿನ ಜನ ಇತರರಿಗಿಂತ ಬಿನ್ನವಾಗಿ ಗುರುತಿಸಿಕೊಂಡಿದ್ದಾರೆ. ವಿಶೇಷವಾಗಿ ಬೇಡ ಬುಡಕಟ್ಟಿನ ಜನ ಹಲವು ಸಾಂಸ್ಕೃತಿಕ ಆಚರಣೆಗಳು ಇಂದಿಗೂ ಉಳಿಸಿಕೊಂಡು ಬಂದಿದ್ದಾರೆ. ಅವರ ಉಡುಗೆ ತೊಡುಗೆ, ವಸತಿ, ನ್ಯಾಯ ತೀರ್ಮಾನ, ವೈದ್ಯಪದ್ದತಿ ಮುಂತಾದವುಗಳನ್ನು ಗಮನಿಸಲಾಗಿದೆ.

ವಿವಿಧ ಸಮುದಾಯಗಳು ಹೇಗೆ ಅನನ್ಯತೆಯಿಂದ ಬದುಕುತ್ತಿದ್ದಾರೆ. ಮೇಲು ಕೀಳು ಭಾವನೆ ಇದೆಯೇ ಎಂಬುದರ ಬಗ್ಗೆ ಚರ್ಚಿಸಲಾಗಿದೆ. ವಿವಿಧ ಮತದವರು ಸಕ್ರೀಯವಾಗಿ ಕೆಲವು ವಿಶೇಷ ಆಚರಣೆಗಳಲ್ಲಿ ಭಾಗವಹಿಸುತ್ತಾರೆ. ಸಾಮಾನ್ಯವಾಗಿ ರಥೋತ್ಸವ, ಸಿಡಿಉತ್ಸವ, ಹೋಳಿಹಬ್ಬ, ಕಾರಿಹುಣ್ಣಿಮೆ, ಊರಮಾರಮ್ಮನ ಜಾತ್ರೆ ಇನ್ನು ಮುಂತಾದ ಕಡೆ ಎಲ್ಲಾ ಕೋಮಿನವರು ಸೇರಿ ವಿವಿಧತೆಯಲ್ಲಿ ಏಕತೆಯನ್ನು ತೋರುತ್ತಾರೆ.

ಆದರೆ ಪ್ರಸ್ತುತ ಅಧ್ಯಯನವೂ ಅಂತಿಮವಲ್ಲ. ಏಕೆಂದರೆ ಈ ಅಧ್ಯಯನದಲ್ಲಿ ವಿವರಿಸಿದ ವಿವಿಧ ಹಂತದ ಶಿಲಾಯುಗದ ನೆಲೆಗಳನ್ನು ಕೇವಲ ಸ್ಥಳ ಪರಿಶೋಧನೆಯಿಂದ ಮಾತ್ರ ಗುರುತಿಸಿ ಅಲ್ಲಿ ದೊರೆತ ಅವಶೇಷಗಳನ್ನು ವಿವರಿಸಲಾಗಿದೆ. ಇವುಗಳಲ್ಲಿ ಮಠದಜೋಗಿಹಳ್ಳಿ, ತುಪ್ಪದಕ್ಕನಹಳ್ಳಿ, ರಂಗಯ್ಯನದುರ್ಗಗಳಂಥ ಇನ್ನು ಮೊದಲಾದ ನೆಲೆಗಳನ್ನು ಉತ್ಖನನ ಮಾಡಿದರೆ ಹೆಚ್ಚಿನ ಮಾಹಿತಿಯು ದೊರೆಯಬಹುದು. ಈ ಪರಿಸರದಲ್ಲಿ ಇತ್ತೀಚಿನ ದೇವಾಲಯಗಳ ಬಗ್ಗೆ ಅಧ್ಯಯನ ಮಾಡುವ ಅಗತ್ಯವಿದೆ. ನದಿಯನ್ನು ಕುರಿತು ಜನಪದ ಚರಿತ್ರೆ ಕಟ್ಟುವ ನೆಲೆಯಲ್ಲಿಯೂ ಅಧ್ಯಯನ ಅವಶ್ಯಕತೆಯಿದೆ. ನದಿಯ ಬಹುಭಾಗ ಸೀಮೆ ಜಾಲಿಗಿಡಗಳಿಂದ ಅವೃತವಾಗಿದೆ. ಅವುಗಳನ್ನು ಕಡಿದು ಸಂರಕ್ಷಣೆ ಮಾಡಬೇಕು. ಅಲ್ಲಲ್ಲಿ ಚೆಕ್ ಡ್ಯಾಂ, ಕೃಷಿಹೊಂಡ, ತಡೆಗೋಡೆ ನಿರ್ಮಿಸಿದರೆ ಇದರಿಂದ ರೈತರಿಗೆ ಸಹಾಯಕ ಹಾಗೂ ಜಲ ಸಂಪತ್ತು ಮತ್ತು ಸಸ್ಯಸಂಪತ್ತು ವೃದ್ದಿಯಾಗುತ್ತದೆ. ಕೆರೆಗಳನ್ನು ಕುರಿತು ಚರ್ಚಿಸುವ ಅವಶ್ಯಕತೆ ಇದೆ ಎಂದು ಹೇಳಬೇಕು.

# ಅನುಬಂಧ

ವಕ್ತೃ ವಿವರ

| ಕ್ರಸಂ | ಹೆಸರು | ವಯಸ್ಸು | ವೃತ್ತಿ | ಜಾತಿ | ಸ್ಥಳ |
|---|---|---|---|---|---|
| ೧ | ರಂಗಪ್ಪ | ೨೮ | ಪೋಲಿಸ್ | ಗೊಲ್ಲ | ಚಿತ್ರಹಳ್ಳಿ |
| ೨ | ಬೋರಯ್ಯ | ೩೦ | ಉಪನ್ಯಾಸಕರು | ನಾಯಕ | ಚಿತ್ರದುರ್ಗ |
| ೩ | ಸಿದ್ದಪ್ಪ | ೪೫ | ವ್ಯಾಪಾರ | ಲಿಂಗಾಯ್ತಿ | ಗೊಡಬನಹಾಳ್ |
| ೪ | ಕರಿಯಪ್ಪ | ೫೦ | ವ್ಯವಸಾಯ | ನಾಯಕ | ಸೊಂಡೆಕೊಳ |
| ೫ | ನಾಗರಾಜ | ೩೧ | ವಕೀಲರು | ಹರಿಜನ | ಹಿರೆಗಂಟನೂರು |
| ೬ | ರಮೇಶ | ೨೨ | ವಿದ್ಯಾಭ್ಯಾಸ | ನಾಯಕ | ಕ್ಯಾಸಾಪುರ |
| ೭ | ಅಬ್ದುಲ್ಲಾ | ೩೫ | ವ್ಯಾಪಾರಿ | ಮುಸ್ಲಿಂ | ಕಾತ್ರಾಳು |
| ೮ | ಮಾರಮ್ಮ | ೬೦ | ಕೂಲಿ | ನಾಯಕ | ವಡ್ಡನಹಳ್ಳಿ |
| ೯ | ಪಾಲಯ್ಯ | ೬೫ | ವ್ಯವಸಾಯ | ನಾಯಕ | ಗಂಜಿಗಟ್ಟೆ |
| ೧೦ | ಕರಿಯಮ್ಮ | ೪೫ | ವ್ಯವಸಾಯ | ಲಿಂಗಾಯ್ತಿ | ಚಿಪ್ಪಿನಕೆರೆ |
| ೧೧ | ತಿಪ್ಪೇರುದ್ರಪ್ಪ | ೫೧ | ಉಪನ್ಯಾಸಕರು | ಹರಿಜನ | ಚಿಕ್ಕಗೊಂಡನಹಳ್ಳಿ |
| ೧೨ | ಓಬಯ್ಯ | ೪೮ | ವ್ಯವಸಾಯ | ನಾಯಕರು | ಕಲ್ಲೇದೇವರಪುರ |
| ೧೩ | ರಮೇಶ | ೪೮ | ಪತ್ರಕರ್ತರು | ಲಿಂಗಾಯ್ತ | ದೊಣಿಹಳ್ಳಿ |
| ೧೪ | ಈರಣ್ಣ | ೪೦ | ವ್ಯಾಪಾರಿ | ನಾಯಕ | ಅಕನೂರು |
| ೧೫ | ವಿರೂಪಾಕ್ಷಿ | ೩೮ | ಚಾಲಕ | ನಾಯಕ | ದಿಬ್ಬದಹಳ್ಳಿ |
| ೧೬ | ತಿಪ್ಪೇಸ್ವಾಮಿ | ೪೨ | ವ್ಯವಸಾಯ | ನಾಯಕ | ಚಿಕ್ಕಮಲ್ಲನಹೊಳೆ |
| ೧೭ | ಕೊಟ್ರೇಶ | ೩೫ | ನೌಕರ | ಲಿಂಗಾಯಿತ | ಮುಷ್ಟೂರು |
| ೧೮ | ಶಾಂತಮ್ಮ | ೨೫ | ಗೃಹಿಣಿ | ನಾಯಕ | ಕೆ.ಬಿ.ಹಟ್ಟಿ |

| | | | | | |
|---|---|---|---|---|---|
| ೧೯ | ರತ್ನಮ್ಮ | ೪೦ | ಕೂಲಿ | ಕುರುಬರು | ಹುಡೇಂ |
| ೨೦ | ಚಂದ್ರಣ್ಣ | ೨೪ | ವ್ಯವಸಾಯ | ನಾಯಕ | ವಲಸೆ |
| ೨೧ | ಕೊಲ್ಲಾರಪ್ಪ | ೩೫ | ವ್ಯವಸಾಯ | ವಡ್ಡರು | ಸಿದ್ದಯ್ಯನಕೋಟೆ |
| ೨೨ | ಓಬಳೇಶ | ೪೦ | ವ್ಯವಸಾಯ | ನಾಯಕ | ಬೀನಕೆರೆ |
| ೨೩ | ಕಾಂತರಾಜ | ೩೫ | ವಕೀಲರು | ಒಕ್ಕಲಿಗ | ಕೊಂಬಹಳ್ಳಿ |
| ೨೪ | ಬೊಮ್ಮಯ್ಯ | ೬೦ | ವ್ಯವಸಾಯ | ನಾಯಕ | ಬನಹಳ್ಳಿ |
| ೨೫ | ನಾಗರಾಜ | ೪೧ | ಶಿಕ್ಷಕ | ನಾಯಕ | ಮಂಕನಹಳ್ಳಿ |
| ೨೬ | ಹನುಮಂತಪ್ಪ | ೪೩ | ದರ್ಜಿ | ನಾಯಕ | ಮಾರಮ್ಮನಹಳ್ಳಿ |
| ೨೭ | ಮಂಕೇಶ | ೨೨ | ಶಿಕ್ಷಕ | ಹರಿಜನ | ಹುರುಳಿಹಳ್ಳಿ |
| ೨೮ | ಬಸವರಾಜ | ೩೩ | ವ್ಯಾಪಾರಿ | ನಾಯಕ | ಹೊಸಪೇಟೆ |
| ೨೯ | ನಂಜಪ್ಪನಾಯಕ | ೫೦ | ವ್ಯವಸಾಯ | ಪಾಳೆಗಾರ | ಯರ್ಜೇನಹಳ್ಳಿ |
| ೩೦ | ಬೊಮ್ಮಣ್ಣ | ೪೧ | ನಿರ್ವಾಹಕ | ಗೊಲ್ಲ | ಒರೆಕೆರೆಹಳ್ಳಿ |
| ೩೧ | ಗೋವಿಂದಪ್ಪ | ೩೪ | ವ್ಯವಸಾಯ | ಹರಿಜನ | ಚಿಕ್ಕೇರಹಳ್ಳಿ |
| ೩೨ | ವೀರಣ್ಣ | ೩೦ | ವಿದ್ಯಾಭ್ಯಾಸ | ಗೊಲ್ಲ | ನಾಗಸಮುದ್ರ |
| ೩೩ | ನಾಗರಾಜ | ೨೫ | ವಿದ್ಯಾಭ್ಯಾಸ | ನಾಯಕ | ರೊಪ್ಪ |
| ೩೪ | ಚಿದಾನಂದ | ೪೫ | ಕೂಲಿ | ಗೊಲ್ಲ | ಸಿದ್ದಾಪುರ |
| ೩೫ | ರವಿ | ೩೫ | ವ್ಯಾಪಾರ | ನಾಯಕ | ರಾಯದುರ್ಗ |
| ೩೬ | ಮಲ್ಲಿಕಾರ್ಜುನ | ೩೫ | ವ್ಯವಸಾಯ | ಹರಿಜನ | ದೇವಸಮುದ್ರ |
| ೩೭ | ಕುಮಾರಸ್ವಾಮಿ | ೫೦ | ವ್ಯವಸಾಯ | ಲಿಂಗಾಯ್ತ | ದೇವಸಮುದ್ರ |
| ೩೮ | ಮಲ್ಲಯ್ಯ | ೪೫ | ವ್ಯವಸಾಯ | ನಾಯಕ | ಮಾಚೇನಹಳ್ಳಿ |

## ಗ್ರಂಥಋಣ


೧. ಅನ್ನಪೂರ್ಣಮ್ಮ.ಸಿ.ಬಿ : ೨೦೦೬, ಮ್ಯಾಸಬೇಡರ ಸಾಂಸ್ಕೃತಿಕ ನಾಯಕಿಯರು, ಅಪ್ರಕಟಿತ ಪಿ.ಎಚ್.ಡಿ. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ.

೨. ಆಂಜನೇಯ : ೨೦೦೫, ಮೊಳಕಾಲ್ಮುರು ತಾಲ್ಲೂಕಿನ ಭಾಷಿಕ ಅಧ್ಯಯನ, ಎಂ.ಫಿಲ್ ಅಪ್ರಕಟಿತ ನಿಬಂಧ, ಕನ್ನಡ ವಿ.ವಿ. ಹಂಪಿ.

೩. ಈಶ್ವರಪ್ಪ ಎಂ.ಜಿ. : ೧೯೮೭, ಮ್ಯಾಸಬೇಡರು, ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು.

೪. ಕರಿಶೆಟ್ಟಿ ರುದ್ರಪ್ಪ : ೧೯೯೫, ಮ್ಯಾಸನಾಯಕರು ಒಂದು ಜನಾಂಗಿಕ ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೫. ಬಾಲಗೋಪಾಲ್, ಅನುವಾದ ಕನ್ನಡಕ್ಕೆ ಎಚ್.ಎಸ್.ಶ್ರೀಮತಿ: ಪ್ರಾಚೀನಭಾರತದಚರಿತ್ರೆ, ೧೯೯೮, ಬೆಳ್ಳಿಚುಕ್ಕಿ ಪ್ರಕಾಶನ, ಶೇಷಾದ್ರಿಪ್ಮರಂ. ಬೆಂಗಳೂರು.

೬. ಕೃಷ್ಣಮೂರ್ತಿ ಜಿ. ಹನೂರು. : ೧೯೯೩, ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ ನೃಪತುಂಗ ರಸ್ತೆ ಬೆಂಗಳೂರು-೨

೭. ಗಿರಿಜ.ಟಿ. : ೧೯೯೧, ಚಿತ್ರದುರ್ಗ ಜಿಲ್ಲಾದರ್ಶಿನಿ,ರೇಖಾ ಪ್ರಕಾಶನ ೧/೮೯೮ ಮೈಸೂರು ಮಠದ ರಸ್ತೆ, ದಾವಣಗೆರೆ.

೮. ಗಿರಿಜ.ಟಿ. : ಇದು ನಮ್ಮ ದಾವಣಗೆರೆ ಜಿಲ್ಲೆ, ನಿಹಾರಿಕಾ ಪ್ರಕಾಶನ, ಅಕ್ಕಮಹಾದೇವಿ ರಸ್ತೆ ದಾವಣಗೆರೆ ಜಿಲ್ಲೆ.

೯. ಗಿರಿಜ.ಟಿ. :೨೦೦೧, ಭಾರತದ ನದಿಗಳು, ನಿಹಾರಿಕಾ ಪ್ರಕಾಶನ, ಪಿ.ಜೆ. ಬಡವಣೆ ದಾವಣಗೆರೆ.

೧೦. ಗೋಪಾಲ ಬಾ.ರಾ. : ೧೯೮೨, ಕರ್ನಾಟಕದಲ್ಲಿ ನವಶಿಲಾಯುಗ, ಕರ್ನಾಟಕ ವಿಶ್ವವಿದ್ಯಾಲಯ. ಧಾರವಾಡ.

೧೧. ಜಯಣ್ಣ.ಯು. : ೨೦೦೫, ಮೊಳಕಾಲ್ಮುರು ತಾಲ್ಲೂಕಿನ ಪುರಾತತ್ವೀಯ ಪರಿಸರ, ಅಪ್ರಕಟಿತ ಪಿ.ಎಚ್‌ಡಿ ಪ್ರಬಂಧ, ಕ ವಿ.ವಿ. ಹಂಪಿ.

೧೨. ಗಂಡುಗಲಿ ಟಿ.ಎನ್. : ೧೯೯೫, ನೋಡಬನ್ನಿ ಚಿತ್ರದುರ್ಗ, ಮದಕರಿ ಪ್ರಕಾಶನ ತ.ರಾ.ಸು. ಬೀದಿ, ಚಿತ್ರದುರ್ಗ.

೧೩. ಚೆನ್ನಬಸಪ್ಪ. ಎಸ್. ಪಾಟೀಲ್. : ೨೦೦೦, ಕರ್ನಾಟಕದ ಕೋಟೆಗಳು, ಸಂಪುಟ ೧ ಕನ್ನಡ ವಿಶ್ವವಿದ್ಯಾಲಯ ಹಂಪಿ.

೧೪. ಚಿದಾನಂದಮೂರ್ತಿ.ಎಂ. : ೧೯೭೯, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ ಮೈಸೂರು.

೧೫. ಚಿದಾನಂದಮೂರ್ತಿ.ಎಂ. : ೧೯೮೩, ವೀರಗಲ್ಲುಗಳು ಮತ್ತು ಮಾಸ್ತಿಕಲ್ಲುಗಳು, ಐ.ಬಿ.ಹೆಚ್.ಪ್ರಕಾಶನ, ಬೆಂಗಳೂರು.

೧೬. ಚಂದ್ರಶೇಖರಯ್ಯ ಎಂ. : ೧೯೮೭, ಕೂಡ್ಲಿಗಿ ತಾಲ್ಲೂಕಿನ ದರ್ಶನ, ಐ.ಬಿ.ಹೆಚ್.ಪ್ರಕಾಶನ ಬೆಂಗಳೂರು.

೧೭. ತಿಪ್ಪೇಸ್ವಾಮಿ. : ೨೦೦೬, ಚಿತ್ರದುರ್ಗರಕ್ಷಣಾ ವಾಸ್ತುಶಿಲ್ಪ, ಅಪ್ರಕಟಿತ ಪಿ.ಎಚ್.ಡಿ ಪ್ರಬಂಧ, ಕ.ವಿ.ವಿ.ಹಂಪಿ.

೧೮. ತಿಪ್ಪೇಸ್ವಾಮಿ. : ೨೦೦೫ ದಾವಣಗೆರೆ ಜಿಲ್ಲೆಯ ದೇವಾಲಯಗಳು, ಪಿ.ಎಚ್.ಡಿ.ಪ್ರಬಂಧ ಕ.ವಿ.ವಿ.ಹಂಪಿ.

೧೯. ತಿಪ್ಪೇಸ್ವಾಮಿ. ಎಚ್. : ೨೦೦೧, ಕೂಡ್ಲಿಗಿ ತಾಲ್ಲೂಕಿ ಪ್ರಾಗೈತಿಹಾಸಿಕ ನೆಲೆಗಳು ಲೇಖನ ಇತಿಹಾಸ ದರ್ಶನ ಸಂ ೧೬

೨೦. ಪ್ರಭಾಕರ್ .ಎ.ಎಸ್. : ೨೦೦೬, ಮ್ಯಾಸಬೇಡರ ಕಥನಗಳು, ಪ್ರಸಾರಾಂಗ ಕ.ವಿ.ವಿ. ಹಂಪಿ.

೨೧. ಮೀರಾಸಾಬಿಹಳ್ಳಿ ಶಿವಣ್ಣ. : ೧೯೯೫, ಮ್ಯಾಸ ಮಂಡಲ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು

೨೨. ದೇವರಕೊಂಡಾರೆಡ್ಡಿ. : ೧೯೯೮, ತಲಗಾಡಿನ ಗಂಗರ ದೇವಾಲಯಗಳು ಒಂದು ಅಧ್ಯಯನ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೨೩. ಭೀಮರೆಡ್ಡಿ ಕೆ.ಎನ್. :೧೯೮೭, ಮೊಳಕಾಲ್ಮುರು ತಾಲ್ಲೂಕು ದರ್ಶನ, ಐ.ಬಿ.ಹೆಚ್.ಪ್ರಕಾಶನ ಬೆಂಗಳೂರು.

೨೪. ಬಸವರಾಜಪ್ಪ. : ೨೦೦೬, ಚಿತ್ರದುರ್ಗ ಭೂಹಿಡುವಳಿಗಳ ಅಧ್ಯಯನ, ಅಪ್ರಕಟಿತ ಪಿ.ಎಚ್.ಡಿ. ಪ್ರಬಂಧ, ಕ.ವಿ.ವಿ. ಹಂಪಿ.

೨೫. ತಿಪ್ಪೇರುದ್ರಸ್ವಾಮಿ. : ೧೯೯೭, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಡಿ.ವಿ.ಕೆ ಮೂರ್ತಿ ಪ್ರಕಾಶನ ಮೈಸೂರು.

೨೬. ನರಸಿಂಹರಾಜ .ಟಿ. : ೧೯೯೮, ಮ್ಯಾಸಬೇಡರ ಸಾಂಸ್ಕೃತಿಕ ವೀರರು ಒಂದು ಅಧ್ಯಯನ, ಕನ್ನಡಭಾರತಿ, ಕುವೆಂಪು ವಿ.ವಿ. ಶಿವಮೊಗ್ಗ.

೨೭. ಮಂಜುನಾಥ ಬೇವಿನಕಟ್ಟೆ : ೨೦೦೭, ಅದಿವಾಸಿ, ಸಾಹಿತ್ಯ ನಂದನ ನಂ ೯ ೪ನೇ ಇ ಬ್ಲಾಕ್, ಬೆಂಗಳೂರು.

೨೮. ರಂಗಪ್ಪ ಎಂ. : ೧೯೭೧, ನುಂಕಮಲೆ ಪರಮಾರ್ಥ, ಮೊಳಕಾಲ್ಮುರು.

೨೯. ರವಿಕುಮಾರ್ ಎನ್.ಎಂ ಮತ್ತು ವೃಷಬೇಂದ್ರಚಾರ್ ಅರ್ಕಸಾಲಿ(ಸಂ) : ೧೯೯೮, ಮುನ್ನಡೆಯ ಕೂಡ್ಲಿಗಿ, ಹೇಮಂತ ಪ್ರಕಾಶನ, ಎಂ.ಬಿ.ಐಯ್ಯನಹಳ್ಳಿ.

೩೦. ರಾಜಣ್ಣ ಆರ್. : ೧೯೮೨, ನಾಯಕ ಜನಾಂಗದ ಇತಿಹಾಸ, ಚಳ್ಳಕೆರೆ.

೩೧. ರಹಮತ್ ತರೀಕೆರೆ. : ೨೦೦೬, ಕರ್ನಾಟಕದಲ್ಲಿ ನಾಥಪಂಥ, ಪ್ರಸಾರಾಂಗ ಕ.ವಿ.ವಿ. ಹಂಪಿ.

೩೨.ರಮೇಶ .ಸ.ಚಿ. : ೨೦೦೪, ನೀರು , ಪ್ರಸಾರಾಂಗ, ಕ.ವಿ.ವಿ ಹಂಪಿ.

೩೩. ರಾಮಮೂರ್ತಿ ಜೆ.ಆರ್. : ೧೯೯೮, ಮೊಳಗುವ ಕಲ್ಲು ಸ್ಮರಣ ಸಂಚಿಕೆ ಸ್ವಾಗತ ಸಮಿತಿ, ಚಿತ್ರದುರ್ಗ ೭ನೇ ಕನ್ನಡ ಸಾಹಿತ್ಯ ಸಮ್ಮೇಳನ, ಮೊಳಕಾಲ್ಮುರು.

೩೪. ರಾಮಮೂರ್ತಿ ದೋಣಿಹಳ್ಳಿ. : ೨೦೦೨, ಗಡಿನಾಡು, (ಮೊಳಕಾಲ್ಲುರು ಗಡಿನಾಡು ಉತ್ಸವ ನೆನಪಿನ ಸಂಚಿಕೆ) ವಿಚಾರ ಪ್ರಕಾಶನ. ದಾವಣಗೆರೆ.

೩೫. ಲಕ್ಷ್ಮಣ್ ತೆಲಗಾವಿ ಮತ್ತು ಎಂ.ವಿ. ಶ್ರೀನಿವಾಸ. : ಚಂದ್ರವಳ್ಳಿ, ಜಿಲ್ಲಾ ಇತಿಹಾಸ ಸಂಶೋಧನಾ ಮಂಡಳಿ, ಚಿತ್ರದುರ್ಗ.

೩೬. ಲಕ್ಷ್ಮಣ್ ತೆಲಗಾವಿ ಮತ್ತು ವೆಂಕಟಚಾರ್. : ಐತಿಹಾಸಿಕ ಚಿತ್ರದುರ್ಗ, ೧೯೯೩

೩೭. ಲಕ್ಷ್ಮಣ್ ತೆಲಗಾವಿ ಮತ್ತು ಎಂ.ವಿ.ಶ್ರೀನಿವಾಸ. : ೧೯೭೬, ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು, ಹುಲ್ಲೂರು ಶ್ರೀನಿವಾಸ ಜೊಯಿಸರ ಗ್ರಂಥ ಪ್ರಕಟಣ ಸಮಿತಿ, ಚಿತ್ರದುರ್ಗ.

೩೮. ಲಕ್ಷ್ಮಣ್ ತೆಲಗಾವಿ. : ೨೦೦೪,ಮೌರ್ಯ ಮತ್ತು ಶಾತವಾಹನ ಯುಗ, ಪ್ರಸಾರಾಂಗ ಕ.ವಿ.ವಿ.ಹಂಪಿ.

೩೯. ಲಕ್ಷ್ಮಣ್‌ತೆಲಗಾವಿ (ಸಂ) : ೧೯೮೭, ಹರತಿಸಿರಿ, ವಾಲ್ಮೀಕಿ ಸಾಹಿತ್ಯ ಸಂಪದ, ಹರ್ತಿಕೋಟೆ.

೪೦. ವಿರೂಪಾಕ್ಷಿ ಪೂಜಾರಹಳ್ಳಿ. : ೨೦೦೬, ಚಿನ್ನಹಗರಿ ಸಿರಿ, ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆ.

೪೧. ವಿರೂಪಾಕ್ಷಿ ಪೂಜಾರಹಳ್ಳಿ. : ೨೦೦೬, ವಾಲ್ಮೀಕಿ ಸಿರಿ, ಚಿನ್ನಹಗರಿ ಪ್ರಕಾಶನ, ಕೆ.ಬಿ.ಹಟ್ಟಿ ಪೂಜಾರಹಳ್ಳಿ, ಬಳ್ಳಾರಿ ಜಿಲ್ಲೆ.

೪೨. ವಿರೂಪಾಕ್ಷಿ ಪೂಜಾರಹಳ್ಳಿ. : ೨೦೦೨, ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ ಕ.ವಿ.ವಿ ಹಂಪಿ.

೪೩. ವಿರೂಪಾಕ್ಷಿ ಪೂಜಾರಹಳ್ಳಿ. : ೨೦೦೩, ಅಕ್ಕಮ್ಮನ ಆಚರಣೆ, ಪ್ರಸಾರಾಂಗ ಕ.ವಿ.ವಿ. ಹಂಪಿ.

೪೪. ವಿರೂಪಾಕ್ಷಿ ಪೂಜಾರಹಳ್ಳಿ. : ೨೦೦೭, ಬೇಟೆ ಮತ್ತು ಬೇಡರು, ಚಿನ್ನಹಗರಿ ಪ್ರಕಾಶನ ಕೆ.ಬಿ.ಹಟ್ಟಿ, ಪೂಜಾರಹಳ್ಳಿ ಬಳ್ಳಾರಿ ಜಿಲ್ಲೆ.

೪೫. ವಿರೂಪಾಕ್ಷಿ ಪೂಜಾರಹಳ್ಳಿ. : ೨೦೦೬,ಕಾಮಗೇತಿ ವಂಶಜರ ಚರಿತ್ರೆ, ಪ್ರಸಾರಾಂಗ ಕ.ವಿ.ವಿ. ಹಂಪಿ.

೪೬. ವಾಸುದೇವರಾಜ ಎಂ. : ೨೦೦೩, ಕರ್ನಾಟಕದ ನದಿಗಳು, ಸಪ್ನ ಬುಕ್ ಹೌಸ್ ತುಂಗ ಕಾಂಪ್ಲಕ್ಸ್, ಗಾಂಧೀ ನಗರ. ಬೆಂಗಳೂರು.

೪೭. ಶಿವತಾರಕ್ ಕೆ.ಬಿ. : ೨೦೦೧, ಕರ್ನಾಟಕದ ಪುರಾತತ್ವ ನೆಲೆಗಳು, ಕ.ವಿ.ವಿ ಹಂಪಿ.

೪೮. ಶ್ರೀನಿವಾಸ ರಿತ್ತಿ. : ೧೯೮೭,ಅಶೋಕನಧರ್ಮಶಾಸನಗಳು, ಪ್ರಸಾರಾಂಗ ಕ.ವಿ.ವಿ ಹಂಪಿ.

೪೯. ಶ್ರೀನಿವಾಸ ಪಾಡೆಗಾರ. ಪುರಾತತ್ವ ಶಾಸ್ತ್ರಪರಿಚಯ, ರಾಮಾಶ್ರಮ ಪಬ್ಲೀಕೇಷನ್, ಧಾರವಾಡ.

೫೦. ಶಂಭ ಜೋಷಿ. : ೧೯೭೬, ಸಂಸ್ಕೃತಿ ಆರಂಭವಾದ ಬಗೆ, ಶಂಭ ಸಂಸ್ಕೃತಿ ಸಂಪುಟ, ಕರ್ನಾಟಕ ಸಂಸ್ಕೃತಿ,ಬೆಂಗಳೂರು.

೫೧. ಶೇಷಶಾಸ್ತ್ರಿ ಆರ್. : ೧೯೮೨, ಕರ್ನಾಟಕದಲ್ಲಿ ವೀರಗಲ್ಲುಗಳು, ಕನ್ನಡ ಸಾಹಿತ್ಯ ಪರಿಷತ್ ಬೆಂಗಳೂರು,

೫೨. ಸುಂದರ. ಅ. : ೧೯೮೫, ಬ್ರಹ್ಮಗಿರಿ ಮತ್ತು ಚಂದ್ರವಳ್ಳಿ, ಐ.ಬಿ.ಹೆಚ್. ಪ್ರಕಾಶನ, ಬೆಂಗಳೂರು.

೫೩. ಸುಂದರ. ಅ. : ೧೯೯೭ , ಕರ್ನಾಟಕ ಚರಿತ್ರೆ, ಸಂಪುಟ ೧, ಕ.ವಿ.ವಿ ಹಂಪಿ.

೫೪. ಸೋಮಶೇಖರ.ಎಸ್.ವೈ. : ೨೦೦೪, ಜಟಂಗಿರಾಮೇಶ್ವರದರ್ಶನ, ಸುಮೇಧ ಪ್ರಕಾಶನ, ದೇವಸಮುದ್ರ, ಚಿತ್ರದುರ್ಗ.

೫೫. ಸೂರ್ಯನಾಥ ಕಾಮತ್ (ಸಂ) : ೧೯೮೪, ಕರ್ನಾಟಕ ರಾಜ್ಯ ಗೆಜೆಟಿಯರ್ ಭಾಗ ೧, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು.

೫೬. ಕೆ.ಎಂ. ಸುರೇಶ, ವಾಸದೇವ ಬಡಿಗೇರ, ಮಾಡಲಗೇರಿ ಕೊಟ್ರೇಶ, ಎಸ್.ವೈ ಸೋಮಶೇಖರ. : ೧೯೯೯, ಕರ್ನಾಟಕ ದೇವಾಲಯ ಕೋಶ ಬಳ್ಳಾರಿ ಜಿಲ್ಲೆ, ಕ.ವಿ.ವಿ. ಹಂಪಿ.

೫೭. ಸಿದ್ದನ ಗೌಡ. : ೨೦೦೭, ತುಂಗಭದ್ರ ನದಿ ಪರಿಸರದ ಧಾರ್ಮಿಕ ಕ್ಷೇತ್ರಗಳು, ಅಪ್ರಕಟಿತ ಎಂ.ಫಿಲ್ ನಿಬಂಧ, ಕ.ವಿ ವಿ ಹಂಪಿ.

**ಆಂಗ್ಲ ಪುಸ್ತಕಗಳು**

೧. ಸತ್ಯನ್.ಬಿ.ಎನ್. : ೧೯೬೭, ಚಿತ್ರದುರ್ಗ ಡಿಸ್ಟ್ರಿಕ್ಟ್ ಗೆಜೆಟಿಯರ್, ಗರ್ವನಮೆಂಟ್ ಆಫ್ ಕರ್ನಾಟಕ, ಬೆಂಗಳೂರು.

೨. ಶೇಷಾದ್ರಿ. : ಸ್ಟೋನ್ ಯೂಸಿಂಗ್ ಕಲ್ಚರೇಸ್ ಆಫ್ ಫ್ರೀ ಅಂಡ್ ಪ್ರೋಟೋ ಹಿಸ್ಟಾರಿಕ್ ಮೈಸೂರು.

೩ ಕೆ.ಪೆದ್ದಯ್ಯ. : ೧೯೯೫, ಎನ್ಷಿಯಂಟ್ ಆಂಧ್ರ ಹಿಸ್ಟರಿ ಅಂಡ್ ಅರ್‌ಕ್ಯಾಲಾಜಿ ನ್ಯೂ ಲೈಟ್ ಅನ್ ಅರ್ಲಿ ಅಗ್ರೋ ಪೊಷ್ಟರಲ್ ಕಮ್ಯುನಿಟಿಸ್ ಆಫ್ ಸೌತ್ ಆಂಧ್ರಪ್ರದೇಶ, ಹಿಸ್ಟರಿ ಕಾಂಗ್ರೇಸ್ ಆನಂತಪುರ.

೪. ಕೆಲ್‌ಸಾಲ್. ಜೆ., ಮದ್ರಾಸ್ ಡಿಸ್ಟ್ರಿಕ್ಟ್ ಗೆಜೆಟಿಯರ್ ಬಳ್ಳಾರಿ ಸಂಪುಟ ೪, ೨೦೦೧, ಮದ್ರಾಸ್ ಗರ್ವನಮೆಂಟ್ ಪ್ರೆಸ್, ಮದ್ರಾಸ್.

೫ ಡಬ್ಲ್ಯೂ. ಪ್ರಾನ್ಸಿಸ್. : ೨೦೦೧, ಮದ್ರಾಸ್ ಗೆಜೆಟಿಯರ್ ಸಂಪುಟ ೨, ಕಾಸ್ಮೋ ಪಬ್ಲೀಕೇಷನ್ ಇಂಡಿಯಾ

ದಿನಪತ್ರಿಕೆಗಳು

ವಾಲ್ಮೀಕಿ ಕರ್ನಾಟಕ

ವಾಲ್ಮೀಕಿ ಸಂಪದ

ಸಂಕ್ರಮಣ

ಜನಪದ

KARNATAKA

NO. 57

CHITRADURGA




ಕರ್ನಾಟಕ ಭೂಪಟದಲ್ಲಿ ಚಿನ್ನಹಗರಿ ನದಿ



# MOLAKALMURU TALUK

E : 1 inch = 1.33 miles

SANDURTALUKA

KUDLIGITALUK (Bellary District)

ANDRA PRADESH

DEVASAMUDRA

MOLAKALMURU

CHALAKERE TALUKA

| REFERENCE |
|---|
| NATIONAL HIGHWAYS |
| STATE HIGHWAYS |
| MAJOR DISTRICT HIGHWAYS |
| OTHER DISTRICT ROADS |
| VILLAGE ROADS |
| HOSPITALS |
| RIVERS & NALAS |
| I.B. & T.BUNGALOWS |
| RAILWAY LINES |

ASST. EXE. ENGINEER
Z.P.E. SUB-DVN. MOLAKALMURU

EXECUTIVE ENGINEER
Z.P.E. DIVISION, CHITRADURGA

GNED & SUPPLIED BY : MAH

ಮೊಳಕಾಲ್ಮುರು ತಾಲೂಕಿನ ಭೂಪಟದಲ್ಲಿ ಚಿನ್ನಹಗರಿ ನದಿ




ಚಿನ್ನಹಗರಿನದಿಗೆ ಕಟ್ಟಿರುವ ಅಣೆಕಟ್ಟು .ರಂಗಯ್ಯನದುರ್ಗ




ನೀರುಬಿಡುವ ಬಾಗಿಲುಗಳು·ರಂಗಯ್ಯನದುರ್ಗಜಲಾಶಯ



ಸಿದ್ದಯ್ಯನಕೋಟೆಯಬಳಿ ಹರಿಯುವ ಚಿನ್ನಹಗರಿನದಿ



ಸಿದ್ದಾಪುರಕೆರೆ



ಚೌಡೇಶ್ವರಿದೇವಾಲಯ .ಚಿಕ್ಕಗೊಂಡನಹಳ್ಳಿ



ಸಂಗೇನಹಳ್ಳಿ ಕೆರೆ



ಆನೆಜರಲು · ಓಬಳದೇವರಗುಡ್ಡ



ಸೈನಿಕರ ಸಾಲು ಹನೆಯಕೋಟೆ . ಬ್ರಹ್ಮಗಿರಿ



ಸವಾರನಾಗಿರುವ ಯೋಧನ ಚಿತ್ರ · ಕುಮತಿ



ರಾಕ್ಷಸಕಲ್ಲುಗಳು · ಕುಮತಿ



ಬಸವನವಿಗ್ರಹ - ಕಲ್ಲೇದೇವಪುರ



ಕಲ್ಲೇಶ್ವರದೇವಾಲಯದ ಆವರಣ - ಕಲ್ಲೇದೇವಪುರ



ರಾಮದೇವಾಲಯ · ಚಿಕ್ಕೇರಹಳ್ಳಿ



ಆಂಜನೇಯದೇವಾಲಯ · ಕಮುಂಕಲಗೊಂದಿ



ವೀರಗಲ್ಲು .ಬ್ರಹ್ಮಗಿರಿ



ಜೈನಬಸದಿ ಬಳಿಇರುವ ಶಾಸನ. ಬ್ರಹ್ಮಗಿರಿ




ಅಕ್ಕತಂಗಿದೇವಾಲಯ ಬ್ರಹ್ಮಗಿರಿ



ಕಲ್ಲೇಶ್ವರ ದೇವಾಲಯದ ಶಿಖರ.ಕಲ್ಲೇದೇವರಪುರ

